CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨, ೨೦೦೪ (ಭಾದ್ರಪದ ೧೧, ಶಕ ವರ್ಷ ೧೯೨೬) | ಸಂಚಿಕೆ ೩೬ |
|---|---|---|

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ತೋಉನಿ:ಕಉ:ವಿನಿ2:ಬಿಜಿಟಿ:59:2004-05, ದಿನಾಂಕ: 12ನೇ ಆಗಸ್ಟ್ 2004**

ಕಬ್ಬನ್ ಉದ್ಯಾನವನದ ಅಧೀನದ ರಿಂಗ್‌ವುಡ್ ವೃತ್ತದ ತ್ರಿಭುಜಾಕಾರದ ಉದ್ಯಾನವನವನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಭೂದೃಶ್ಯ ವಿಭಾಗ ರವರ ಅಂದಾಜುಪಟ್ಟಿಯ ರೀತಿ ಅಭಿವೃದ್ಧಿ ಪಡಿಸಬೇಕಾಗಿರುತ್ತದೆ. ಅಧಿಕೃತ ಗುತ್ತಿಗೆದಾರರು ಈ ಕೆಳಗೆ ಸೂಚಿಸಿದ ವಿವರಗಳಂತೆ ರಿಂಗ್‌ವುಡ್ ವೃತ್ತದ ಬಳಿ ತ್ರಿಭುಜಾಕಾರದ ಉದ್ಯಾನವನವನ್ನು ಅಭಿವೃದ್ಧಿಪಡಿಸಲು ನಿಮ್ಮ ಟೆಂಡರ್‌ನ್ನು ಮೊಹರಾದ ಲಕೋಟೆಯಲ್ಲಿಟ್ಟು ದಿನಾಂಕ: 22.9.2004 ರಂದು ಸಂಜೆ 4.00 ಗಂಟೆಯೊಳಗೆ ಈ ಕಛೇರಿಗೆ ನೀಡಲು ಕೋರಿದೆ.

**ವಿವರಗಳು**

| | | |
|---|---|---|
| 1) | **ಹುಲ್ಲುಹಾಸನ್ನು ಅಭಿವೃದ್ಧಿಪಡಿಸುವುದು:** | |
| 1. | ನೆಲವನ್ನು ಕೆತ್ತುವುದು, ಮೇಲ್ಪದರದ ಮಣ್ಣನ್ನು ತೆಗೆಯುವುದು. ಹುಲ್ಲುಹಾಸು ಹಾಕುವ ಜಾಗವನ್ನು ಕೆತ್ತುವುದು ಹಾಗೂ ಮೇಲ್ಪದರದ 0.15 ಮೀ. ಮಣ್ಣನ್ನು ಕನಿಷ್ಟ 0.45 ಮೀ. ಆಳದವರೆಗೆ ತೆಗೆಯುವುದು ನಂತರ ಅನುಪಯುಕ್ತ ಡೆಬರೀಸ್, ಹುಲ್ಲು ಹಾಗೂ ಇತ್ಯಾದಿ ಕಳೆ ಇವುಗಳನ್ನು ತೆಗೆದು, ಮಣ್ಣಿನ ಜೊತೆಯಲ್ಲಿ 500 ಮೀ. ದೂರದವರೆಗೆ ಹೊರಗೆ ಸಾಗಿಸುವುದು (ತುಂಬುವುದು ಹಾಗೂ ಸಾಗಾಣಿಕೆ ಸೇರಿ) (1500 X 0.15) | 180 ಘ.ಮೀ. |
| 2) | **ಮೊದಲ ಅಗೆತ:** | |
| 2. | ಹುಲ್ಲು ಹಾಸು ಹಾಕಲು ಮಣ್ಣನ್ನು ಅಗೆಯುವುದು, ಕಳೆಗಳನ್ನು ತೆಗೆಯುವುದು ಅನುಪಯುಕ್ತ ಡೆಬರೀಸ್ ಹಾಗೂ ಹೆಂಟೆಗಳನ್ನು ಹೊಡೆದು ಹಾಕಿ ನೀರು ಹಾಯಿಸುವುದು (1200 X 0.45) | 540 ಘ.ಮೀ. |
| | **ಎರಡನೇ ಅಗೆತ:** | |
| 3. | ಹುಲ್ಲು ಹಾಸು ಹಾಕುವ ಜಾಗವನ್ನು ಎರಡನೇ ಬಾರಿಗೆ ಕಳೆ ಇತ್ಯಾದಿಗಳನ್ನು ತೆಗೆದು ಸಮತಟ್ಟು ಮಾಡುವುದು. | 540 ಘ.ಮೀ. |
| 4. | ಅಗತ್ಯವಿರುವ ಕೆಂಪು ಮಣ್ಣನ್ನು ಕ್ರೋಡೀಕರಿಸಿ ಹುಲ್ಲು ಹಾಕುವ ಜಾಗಕ್ಕೆ ತುಂಬುವುದು. (1200 X 0.15) | 180 ಘ.ಮೀ. |
| 5. | ಹುಲ್ಲುಹಾಸು ಹಾಕಲು ಬೇಕಾಗುವ ಇತರೆ ಪರಿಕರಗಳಾದ ಮರಳು, ಕೊಟ್ಟಿಗೆ ಗೊಬ್ಬರ, ಕೆಂಪು ಮಣ್ಣು, ಇವುಗಳನ್ನು 1:3:6 ಪ್ರಮಾಣದಲ್ಲಿ ಬೆರೆಸಿ ಮಿಶ್ರಣ ಮಾಡಿ ಇವುಗಳನ್ನು 7.5 ಸಿ.ಎಂ. ದಪ್ಪಕ್ಕೆ ಹರಡುವುದು.<br>ಮರಳು<br>ಕೊಟ್ಟಿಗೆ ಗೊಬ್ಬರ<br>ಕೆಂಪು ಮಣ್ಣು | <br><br>9.00 ಸಿಎಂಟಿ<br>27.00 ಸಿಎಂಟಿ<br>54.00 ಸಿಎಂಟಿ |

| | | |
|---|---|---|
| 6. | ಹುಲ್ಲುಹಾಸು ಹಾಕಲು ಬೇಕಾಗಿರುವ ರಸಗೊಬ್ಬರ ಹಾಗೂ ಹಿಂಡಿಗಳು, ಬೇವಿನ ಹಿಂಡಿ, ಬೋನ್‌ಮೀಲ್, ಪೊಟಾಶ್, ಅಮೋನಿಯಂ ಸಲ್ಫೇಟ್ ಮತ್ತು ಸಸ್ಯಸಂರಕ್ಷಣೆ, ಔಷಧಿಗಳಾದ ಫ್ಯುರಿಡಾನ್ ಹಾಗೂ ತಿಫ್ಯುಟ್ ಇವುಗಳನ್ನು 1200 ಚದರ ಮೀಟರ್ ಜಾಗದ ಅಗತ್ಯಕ್ಕೆ ತಕ್ಕಂತೆ ಸಂಬಂಧಿಸಿದ ವಿಭಾಗದ ಅಧಿಕಾರಿಗಳು ಮೇಲ್ವಿಚಾರಣೆ ಮೇರೆಗೆ ಸರಬರಾಜು ಮಾಡಿ ಸಿಂಪಡಿಸುವುದು. | 1200 ಚ.ಮೀ. |
| 7. | ಹುಲ್ಲುಹಾಸನ್ನು ಅಭಿವೃದ್ಧಿಪಡಿಸಲು ಈ ಕೆಳಕಂಡ ಅಳತೆಗೆ ಫಾಸ್‌ಪಾಲಿಮ್ ಹುಲ್ಲನ್ನು ಸರಬರಾಜು ಮಾಡಬೇಕಾಗಿರುತ್ತದೆ. | 1200 ಚ.ಮೀ. |
| 8. | **ಕೂಲಿ ದರ:**<br>ಸಾಮಗ್ರಿಗಳನ್ನು ನಿಗದಿತ ಪ್ರಮಾಣದಲ್ಲಿ ಮಿಶ್ರಣ ಮಾಡುವುದು, ಹರಡುವುದು, ಗೊಬ್ಬರ ಸಿಂಪರಣೆ, ಅಗೆಯುವುದು, ಸಮತಟ್ಟುಗೊಳಿಸುವುದು, ಒಳ್ಳೆ ಗುಣಮಟ್ಟದ ಲಾನ್ ಹುಲ್ಲಿನಿಂದ ಡಿಬ್ಲಿಂಗ್ ಮಾಡುವುದು 5 X 5 ಸೆ.ಮೀ. ನಲ್ಲಿ | 1200 ಚ.ಮೀ. |
| 3) | **ಶ್ರಬ್ಸ್:**<br>ಶ್ರಬ್ಸ್, ಭೂಮಿಯನ್ನು 1 1/2 X 1 1/2 X 1 1/2 ಅಡಿ ಆಳಕ್ಕೆ ಅಗೆತ ಮಾಡಿ ಕೆಂಪು ಮಣ್ಣು, ಮರಳು ಮತ್ತು ಗೊಬ್ಬರವನ್ನು ಮಿಶ್ರಣ ಮಾಡಿ 1:2:5: ರಂತೆ ವಿವಿಧ ಜಾತಿಯ ಗಿಡಗಳನ್ನು ನೆಟ್ಟು ಸಮತಟ್ಟು ಮಾಡುವುದು (ಅಗೆತ ಮತ್ತು ಗಿಡಗಳು ಸೇರಿದಂತೆ) | |
| 4) | ಹುಲ್ಲುಹಾಸು ನಿರ್ವಹಣೆ | 3 ತಿಂಗಳು |

**ಷರತ್ತು ಮತ್ತು ನಿಬಂಧನೆಗಳು :**

1. ಟೆಂಡರ್ ಫಾರಂ ಜೊತೆಯಲ್ಲಿ ರೂ.5000-00 ಗಳ ಇ.ಎಂ.ಡಿ. ಯನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ಸದಸ್ಯ ಕಾರ್ಯದರ್ಶಿಗಳು, ಬೆಂಗಳೂರು ಗಾರ್ಡನ್ ಟ್ರಸ್ಟ್, ಲಾಲ್‌ಬಾಗ್, ಬೆಂಗಳೂರು ಇವರಿಗೆ ಸಂದಾಯವಾಗುವಂತೆ ಪಡೆದು ಸಲ್ಲಿಸಬೇಕು. ಡಿ.ಡಿ. ಇಲ್ಲದಿದ್ದ ಪಕ್ಷದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
2. ಟೆಂಡರ್ ಫಾರಂಗಳನ್ನು ಸೀಲ್ ಮಾಡಿರಬೇಕು. ಹಾಗೂ 2004-05ನೇ ಸಾಲಿನ ಕಬ್ಬನ್ ಉದ್ಯಾನವನದ ರಿಂಗ್‌ವುಡ್ ಸರ್ಕಲ್‌ನಲ್ಲಿರುವ ಉದ್ಯಾನವನ ಅಭಿವೃದ್ಧಿ ಮಾಡಲು ಎಂದು ನಮೂದಾಗಿರಬೇಕು.
3. ಟೆಂಡರ್ ಫಾರಂಗಳು, ಈ ಕಛೇರಿಯಿಂದ ದಿನಾಂಕ: 20.9.2004 ರಿಂದ 21.9.2004 ರವರೆಗೆ ರೂ.500-00 ಗಳನ್ನು ಪಾವತಿಸಿ ಪಡೆಯಬಹುದು.
4. ಟೆಂಡರ್ ಫಾರಂಗಳನ್ನು ಈ ಕಛೇರಿಗೆ ಸಲ್ಲಿಸುವ ಕಡೆಯ ದಿನಾಂಕ: 22.9.2004 ರಂದು 4.00 ಗಂಟೆವರೆಗೆ 4.00 ಗಂಟೆಯ ನಂತರ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು. ಹಾಗೂ ಅಂದೇ ಸಂಜೆ 5.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು.
5. ಯಶಸ್ವಿ ಟೆಂಡರ್‌ದಾರರು ಹುಲ್ಲುಹಾಸು ನಿರ್ಮಾಣದ ನಂತರ 3 ತಿಂಗಳ ಕಾಲ ನಿರ್ವಹಣೆ ಮಾಡಬೇಕಾಗಿರುತ್ತದೆ.
6. ಟೆಂಡರ್‌ಗಳನ್ನು ಪುರಸ್ಕರಿಸುವ ಮತ್ತು ತಿರಸ್ಕರಿಸುವ ತೀರ್ಮಾನವು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರದೇ ಅಂತಿಮ ತೀರ್ಮಾನವಾಗಿರುತ್ತದೆ.
7. ಟೆಂಡರ್‌ದಾರರು ಕಳೆದ ಸಾಲಿನ ಆದಾಯ ತೆರಿಗೆಯ ಕ್ಲಿಯರೆನ್ಸ್ ಸರ್ಟಿಫಿಕೇಟನ್ನು ಟೆಂಡರ್‌ನೊಂದಿಗೆ ಲಗತ್ತಿಸಬೇಕು.
8. ಕಳೆದ ಎರಡು ವರ್ಷಗಳಲ್ಲಿ ಹುಲ್ಲುಹಾಸು ನಿರ್ವಹಿಸಿದ ಬಗ್ಗೆ ಅನುಭವ ದೃಢೀಕರಣ ಪತ್ರ ಲಗತ್ತಿಸಬೇಕು.
9. ಆದಾಯ ತೆರಿಗೆ ಹಾಗೂ ಮಾರಾಟ ತೆರಿಗೆ ಅನ್ವಯವಾದಲ್ಲಿ ನಿಯಮಾನುಸಾರ ಬಿಲ್ಲಿನ ಮೂಲದಲ್ಲಿ ಕಟಾಯಿಸಲಾಗುವುದು.
10. ಟೆಂಡರ್‌ದಾರರು ಯಾವುದೇ ಪೂರ್ವ ಷರತ್ತುಗಳನ್ನು ವಿಧಿಸುವಂತಿಲ್ಲ.
11. ಹೆಚ್ಚಿನ ಮಾಹಿತಿ ಮತ್ತು ವಿಷಯಗಳಿಗೆ ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು ರವರ ಕಛೇರಿಯಲ್ಲಿ ಸಂಪರ್ಕಿಸಿ ಮಾಹಿತಿ ಪಡೆಯಬಹುದು.

ಪಿ.ಆರ್. 391 ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು.

**PUBLIC WORKS DEPARTMENT**

**(National Highways)**

**Office of the Executive Engineer, N.H. Special Division, Bangalore**

**TENDER NOTIFICATION**

**No. EE/NH.Spl.Dn/AE-1/DBP/NH-7/NIT-3/2004-05/646, Dated: 12th August 2004**

Sealed Item rate Tenders for the works noted below as per Karnataka transparency in Public procurement Act 2000 in prescribed form in duplicate is invited from the Class-I Contractors registered in KPWD/M.O.R.T. & H approved Firms. The Bids shall be submitted in sealed cover duly superscribing name of the work and shall be addressed to the undersigned with name and full postal address of the bidder. Completed bids will be received in the office of the Superintending Engineer, National Highway Circle, Bangalore or in the office of the Executive Engineer, National Highway Special division, Bangalore up to 4.00 P.M. on 28.09.2004, subject to the conditions laid down in form No. PWG 65, 66 of KPWD

code Vol.II, Special Conditions contained in the schedules and in Karnataka Transparency in Public Procurement Act 2000. The Bids will be opened by the undersigned on the dates noted below. If any one of the dates below happens to be a general holiday, the next convenient day will be intimated.

| Sl. No. | Name of Work | Length in km. | Amount put to Tender (Rs. in lakhs) | EMD in Rs. | Cost of Tender Forms Non refundable | Nature of work | Time for completion of work (Excluding monsoon) |
|---|---|---|---|---|---|---|---|
| 1 | Periodical Renewals by SDBC from Km. 465.000 to 468.000 & Km. 474.000 to 476.000 of NH-7, Hyderabad-Bangalore section | 5.0 | 30.60 | 31000/- | 10,000/- + Taxes | SDBC | One Month |
| 2 | Periodical Renewals by SDBC from Km. 476.000 to 481.000 of NH-7, Hyderabad-Bangalore section | 5.0 | 32.02 | 32000/- | 10,000/- + Taxes | SDBC | One Month |

**GENERAL CONDITIONS:**

1. The contractors interested in bidding for the work may submit an application to the undersigned along with cost of tender documents (non-refundable) to be paid in the form of DD drawn in favour of Executive Engineer, N.H. Special Division., Bangalore payable at Bangalore along with application. The applicants should submit proof of registration and Karnataka Sales Tax Clearance certificate obtained from the concerned Departments while submitting the applications for tender schedules, otherwise the applications will not be considered.

The Schedule of dates is as under:-

a) Last date for receipt of Application : 23-09-2004 Up to 5.00 P.M.
b) Issue of Blank Tender Schedules : 25-09-2004 Up to 5.30 P.M.
c) Last date for submission of Bid : 28.09.2004 Up to 4.00 P.M.
d) Opening of Technical Bid : 28.09.2004 at 4.30 P.M.

**CONDITIONS FOR BIDS:**

1. The EMD in the form of DD/FDR/Pay Order/Bank Guarantee drawn from a Nationalised or Scheduled Bank or NSC (pledged in favour of undersigned only) shall be enclosed with the bid. The EMD pledged in favour of any other authority than the undersigned will be disqualified without entertaining any enquiries/clarifications. The Bank Guarantee shall be strictly as specified in PWG 66 supplied with the tender form.
2. Each tenderer shall own following machinery and enclose with the bid evidence of ownership, as detailed under. The bids submitted without the evidence of ownership as detailed are liable for disqualification.

| Sl.No. | Machinery | Numbers | Evidence of ownership to be furnished |
|---|---|---|---|
| | **For Road works:** | | |
| i) | Hot Mix Plant of 40 to 60 TPH or Higher capacity (as per MORT & H Specification) | 1 | Copy of purchase invoice/sale deed with a copy of purchase invoice from the seller. |
| ii) | Paver Finisher Mechanical | 1 | -do- |
| iii) | Static Road Roller | 2 | -do- |
| iv) | Vibratory Roller | 1 | -do- |
| v) | Mechanical sprayer | 2 | -do- |
| vi) | Tippers | 4 | Copy of RC, FC, TC permit from RTO |

3. Each Tenderer should have individually satisfactorily completed single work of similar nature of value not less than 30% of the value of work in this Notification (up dated at 10% per annum compoundable) in any one financial year during a block period of previous five financial years. Alternatively, the contractor should have completed a billing of 30% of the value of work in this

notification, during the current financial year for similar nature of work. The experience certificate in this regard should invariably have a mention of nature/items of work executed; otherwise the bid is liable for disqualification.

4. Tendering by joint venture is not allowed.
5. Tenderer who has purchased the blank tender schedules and not submitted the sealed tenders for the previous works in this division are not eligible for this tender.
6. The competent Authority reserves the right to reject any or all the tenders without assigning any reasons thereof.
7. Conditional tenders will not be accepted.

Any other details regarding the work, can be obtained from the above office during the office hours.

Executive Engineer,
PR - 392 National Highways Special Division, Bangalore.

**ನಮೂನೆ - 1**

**(9ನೇ ನಿಯಮ ನೋಡಿ)**

**ಖಜಾನೆ ಇಲಾಖೆ**

**ಖಜಾನೆ ನಿರ್ದೇಶನಾಲಯ, ಬೆಂಗಳೂರು**

**ಅಧಿಸೂಚನೆ**

ಖಜಾನೆ ಇಲಾಖೆಯ, ಜಿಲ್ಲಾ ಖಜಾನೆ, ಚಾಮರಾಜನಗರ ಇಲ್ಲಿ ಕೆಲಸ ಮಾಡುತ್ತಿರುವ **ಎ.ಹೆಚ್. ಚಂದ್ರು** ರವರ ಹೆಸರನ್ನು **ಎ.ಹೆಚ್. ಚಂದ್ರಶೇಖರ** ಎಂದು ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ.

ಪಿ.ಡಿ. 145 ಖಜಾನೆ ನಿರ್ದೇಶನಾಲಯ, ಬೆಂಗಳೂರು.

**ಕಾರ್ಮಿಕ ಇಲಾಖೆ**

**ಕಾರ್ಮಿಕ ಅಧಿಕಾರಿಯವರ ಕಛೇರಿ, ಉಡುಪಿ ಜಿಲ್ಲೆ, ಉಡುಪಿ**

**ಬಹಿರಂಗ ಹರಾಜು ಪ್ರಕಟಣೆ ಅಧಿಸೂಚನೆ**

**ಸಂಖ್ಯೆ: ಕಾ.ಕ.ಕೇ.ಕಾ/ಇಎಸ್‌ಟಿ/ಸಿಆರ್-1/2004-05, ದಿನಾಂಕ: 20ನೇ ಆಗಸ್ಟ್ 2004**

**ವಿಷಯ:** ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯ, ಕಾರ್ಕಳ ಕಾರ್ಮಿಕ ಕಲ್ಯಾಣ ಕೇಂದ್ರದ ನಿರುಪಯುಕ್ತ ಪೀಠೋಪಕರಣ, ಹೊಲಿಗೆಯಂತ್ರ, ಆಟಿಕೆ ಸಾಮಗ್ರಿಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಮಂಜೂರಾತಿ ಪತ್ರದ ಸಂಖ್ಯೆ: ಕಾಇ/103 ಎಲ್‌ಇಟಿ/2004, ದಿನಾಂಕ: 12.4.2004.

2) ಮಾನ್ಯ ಕಲ್ಯಾಣ ಆಯುಕ್ತರು, ಬೆಂಗಳೂರು ಇವರ ಕಛೇರಿ ಆದೇಶ ಸಂಖ್ಯೆ: ಕಾಕನಿ/ಆಡಳಿತ-1/ಸಿಆರ್-72/03-04, ದಿನಾಂಕ: 13.4.2004.

ಉಲ್ಲೇಖದಲ್ಲಿ ತಿಳಿಸಿರುವ ಸರ್ಕಾರದ ಆದೇಶದ ಪ್ರಕಾರ ಕಾರ್ಕಳ ಕಾರ್ಮಿಕ ಕಲ್ಯಾಣ ಕೇಂದ್ರಕ್ಕೆ ಸಂಬಂಧಪಟ್ಟ ಅನುಬಂಧದಲ್ಲಿ ತೋರಿಸಿರುವ ಅನುಪಯುಕ್ತ ಪೀಠೋಪಕರಣ ಹಾಗೂ ಇತರೆ ಸಾಮಗ್ರಿಗಳನ್ನು ಹೇಗಿದೆಯೋ ಹಾಗೆ ಇದ್ದ ಸ್ಥಿತಿಯಲ್ಲಿ ದಿನಾಂಕ: 20.09.2004 ರಂದು ಬೆಳಿಗ್ಗೆ 11.30 ಗಂಟೆಗೆ ಕಾರ್ಮಿಕ ನಿರೀಕ್ಷಕರವರ ಕಛೇರಿ, ವೆಂಕಟರಮಣ ದೇವಸ್ಥಾನ ರಸ್ತೆ, ಕಾರ್ಕಳ ಇವರ ಕಛೇರಿಯ ಆವರಣದಲ್ಲಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದೆಂದು ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸಲಾಗಿದೆ.

| ಕ್ರ.ಸಂ. | ಬಹಿರಂಗ ಹರಾಜು ಮಾಡುವ ಸಾಮಗ್ರಿಗಳ ವಿವರಗಳು | ಸುಸ್ಥಿತಿ | ದುಸ್ಥಿತಿ | ಒಟ್ಟು |
|---|---|---|---|---|
| **I** | **ಪೀಠೋಪಕರಣಗಳು:** | | | |
| 1 | ಸ್ಟೀಲ್ ಸ್ಟೂಲ್ | - | 3 | 3 |
| 2 | ಸ್ಟೀಲ್ ಮಡಚುವ ಕುರ್ಚಿಗಳು | - | 2 | 2 |
| 3 | ಸ್ಟೀಲ್ ಟ್ರೇ | 2 | - | 2 |
| 4 | ಸ್ಟೀಲ್ ಟ್ರೇ | 2 | - | 2 |
| 5 | ಸ್ಟೀಲ್ ಡಸ್ಟ್ ಬಿನ್ | - | 2 | 2 |
| 6 | ಎಸ್ ಟೈಪ್ ಕುರ್ಚಿ | - | 1 | 1 |
| **II** | **ಹೊಲಿಗೆ ಯಂತ್ರಗಳು:** | | | |
| 1 | ಟೈಲರ್ ಡೀಲಕ್ಸ್ ಮಾಡೆಲ್ ಹೊಲಿಗೆ ಯಂತ್ರ | 6 | - | 6 |
| 2 | ಕತ್ತರಿ | 4 | - | 4 |
| 3 | ಅಳತೆ ಟೇಪು | 3 | - | 3 |

| ಕ್ರ.ಸಂ. | ಬಹಿರಂಗ ಹರಾಜು ಮಾಡುವ ಸಾಮಗ್ರಿಗಳ ವಿವರಗಳು | ಸುಸ್ಥಿತಿ | ದುಸ್ಥಿತಿ | ಒಟ್ಟು |
|---|---|---|---|---|
| **III** | **ಕ್ರೀಡಾ ಸಾಮಗ್ರಿಗಳು** | | | |
| 1 | ಕೇರಂ ಬೋರ್ಡ್ ಮತ್ತು ಪಾನ್ಸ್ ಸೆಟ್ | - | 4 | 4 |
| 2 | ಚೆಸ್ ಬೋರ್ಡ್ ಮತ್ತು ಪಾನ್ಸ್ ಸೆಟ್ | - | 4 | 4 |
| 3 | ವಾಲಿಬಾಲ್ ಸೆಟ್ | - | 2 | 2 |
| 4 | ವಾಲಿಬಾಲ್ | - | 4 | 4 |
| 5 | ಇನ್‌ಪ್ಲೇಟರ್ | - | 2 | 2 |
| 6 | ಟೆನಿಕ್ವಾಟ್ ಸೆಟ್ | - | 2 | 2 |
| 7 | ಟೆನಿಕ್ವಾಟ್ ರಿಂಗ್ | - | 8 | 8 |
| 8 | ಸ್ಕಿಪ್ಪಿಂಗ್ ಹಗ್ಗ | - | 10 | 10 |
| 9 | ಲೆಜಿಮ್ಸ್ | - | 12 | 12 |
| 10 | ಫುಟ್ಬಾಲ್ | - | 4 | 4 |
| 11 | ಹಾವು ಏಣಿ ಆಟದ ಸೆಟ್ | - | 4 | 4 |
| 12 | ಲೂಡೊ ಸೆಟ್ | - | 4 | 4 |
| 13 | ಬಗೆಟಲ್ ಬೋರ್ಡ್ | - | 2 | 2 |
| 14 | ಚೈನೀಸ್ ಚೆಕ್ಕರ್ | - | 2 | 2 |
| 15 | ರಾಕಿಂಗ್ ಹಾರ್ಸ್ | - | 1 | 1 |
| 16 | ಸೀ ಸಾ | - | 1 | 1 |
| 17 | ಬಾಲ್ ಬ್ಯಾಟ್‌ಮಿಂಟನ್ ಸೆಟ್ | - | 1 | 1 |
| 18 | ಬಾಲ್ ಬ್ಯಾಟ್‌ಮಿಂಟನ್ ರ್‍ಯಾಕೆಟ್ | - | 10 | 10 |
| 19 | ವುಲನ್ ಬಾಲ್ | - | 10 | 10 |
| **IV** | **ಗ್ರಂಥಾಲಯದ ಪುಸ್ತಕಗಳು:** | | | |
| 1 | ಕನ್ನಡ ಪುಸ್ತಕಗಳು | 3 | - | 3 |
| 2 | ಕನ್ನಡ ಪುಸ್ತಕಗಳು | 3 | - | 3 |
| 3 | ಕನ್ನಡ ಪುಸ್ತಕಗಳು | 10 | 420 | 430 |
| **V** | **ಮನರಂಜನೆಯ ಸಾಮಗ್ರಿಗಳು:** | | | |
| 1 | ರೇಡಿಯೋ | 1 | - | 1 |
| 2 | ಸ್ಪೀಕರ್ | 1 | - | 1 |
| 3 | ವೆಸ್ಟರ್ನ್ ಕಲರ್ ಟಿ.ವಿ. | 1 | - | 1 |
| 4 | ಸ್ಟೆಬಿಲೈಸರ್ | 1 | - | 1 |
| 5 | ಆಂಟೆನಾ ಮತ್ತು ವೈರ್ | 1 | - | 1 |
| 6 | ಬೂಸ್ಟರ್ | 1 | - | 1 |
| 7 | ಟಿ.ವಿ. ಸ್ಟ್ಯಾಂಡ್ | 1 | - | 1 |
| 8 | ತೂಗರು ಮಣೆ | - | 1 | 1 |
| **VI** | **ಇತರ ಸಾಮಗ್ರಿಗಳು** | | | |
| 1 | ಇಂಡಿಯಾ ಮ್ಯಾಪ್ | - | 1 | 1 |
| 2 | ಕರ್ನಾಟಕ ಮ್ಯಾಪ್ | - | 1 | 1 |
| 3 | ಅವರ್ ಡ್ಯೂಟೀಸ್ | - | 1 | 1 |
| 4 | ಸಿವಿಕ್ಸ್ ಸೆಟ್ | - | 1 | 1 |
| 5 | ಫಸ್ಟ್ ಏಯ್ಡ್ ಚಾರ್ಟ್ | - | 1 | 1 |
| 6 | ಕನ್ನಡ ಅಕ್ಷರ ಮಾಲೆ | - | 1 | 1 |
| 7 | ಇಂಗ್ಲೀಷ್ ಅಕ್ಷರ ಮಾಲೆ | - | 1 | 1 |
| 8 | ಲೆಹೆಲ್ಸ್ ಚಾರ್ಟ್ | - | 1 | 1 |
| 9 | ಗಡಿಯಾರ | 1 | - | 1 |

**ಬಹಿರಂಗ ಹರಾಜಿನ ಷರತ್ತು ಮತ್ತು ನಿಯಮಗಳು**

1. ಬಹಿರಂಗ ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬ ಸವಾಲುದಾರರು ರೂ.1,000/- ಗಳನ್ನು ಕಾರ್ಮಿಕ ನಿರೀಕ್ಷಕರು, ಕಾರ್ಕಳ ವೃತ್ತ ಇವರ ಕಛೇರಿಯಲ್ಲಿ ಮುಂಗಡವಾಗಿ ಬಹಿರಂಗ ಹರಾಜಿನ ದಿನಾಂಕದಂದು ಬೆಳಿಗ್ಗೆ 10.00 ಗಂಟೆಗೆ ಠೇವಣಿ ಮಾಡಿ ನಂತರ ಹರಾಜಿನಲ್ಲಿ ಭಾಗವಹಿಸಬಹುದು. ಠೇವಣಿ ಮಾಡಿದ ಬಿಡ್ಡುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಾಗಿರುತ್ತಾರೆ.
2. ಮಾನ್ಯ ಕಲ್ಯಾಣ ಆಯುಕ್ತರು, ಕಾರ್ಮಿಕ ಕಲ್ಯಾಣ ಮಂಡಳಿ, ಬೆಂಗಳೂರು, ಇವರಿಂದ ನೇಮಿಸಲ್ಪಟ್ಟ ಕಾರ್ಮಿಕ ಅಧಿಕಾರಿ, ಉಡುಪಿ, ಇವರು ಬಹಿರಂಗ ಹರಾಜು ನಡೆಸುವ ಅಧಿಕಾರ ಹೊಂದಿರುತ್ತಾರೆ.
3. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಮೊತ್ತಕ್ಕೆ ಕರೆದಂತಹ ಸವಾಲುದಾರನನ್ನು ಯಶಸ್ವಿ ಸವಾಲುದಾರನೆಂದು ಪರಿಗಣಿಸಲಾಗುವುದು.
4. ಯಶಸ್ವಿ ಬಿಡ್ಡುದಾರರು ಅಂಗೀಕರಿಸಿ ನಿರ್ಧರಿಸಿದ ಹರಾಜಿನ ಮೊಬಲಗನ್ನು ಕೂಡಲೇ ಸ್ಥಳದಲ್ಲಿ ಪಾವತಿಸಿ ವಸ್ತುಗಳನ್ನು ಪಡೆಯತಕ್ಕದ್ದು. ಮತ್ತು ವಸ್ತುಗಳನ್ನು ವಶಕ್ಕೆ ಪಡೆದುಕೊಂಡು ಎತ್ತುವಳಿ ಮಾಡತಕ್ಕದ್ದು. ತಪ್ಪಿದಲ್ಲಿ ನಿರೀಕ್ಷಣಾ ವೆಚ್ಚವನ್ನು ತೆರಬೇಕಾಗುತ್ತದೆ.
5. ಎಲ್ಲಾ ಹಣವನ್ನು ಕಾರ್ಮಿಕ ನಿರೀಕ್ಷಕರು, ಕಾರ್ಕಳ, ಇವರ ಕಛೇರಿಯಲ್ಲಿ ನಗದು ರೂಪದಲ್ಲಿ ತುಂಬಬೇಕು. ಚೆಕ್ಕುಗಳನ್ನು ಡಿ.ಡಿ. ಗಳನ್ನು ಸ್ವೀಕರಿಸಲಾಗುವುದಿಲ್ಲ.
6. ಮಾರಾಟ ತೆರಿಗೆಯನ್ನು ಹಾಗೂ ಸರ್ಕಾರಕ್ಕೆ ಪಾವತಿಸಬೇಕಾದ ಇತರೆ ತೆರಿಗೆಗಳನ್ನು ಚಲಾವಣೆಯಲ್ಲಿರುವ ದರದ ನಿಯಮಗಳ ಆಧಾರದ ಮೇರೆಗೆ ಸವಾಲಿನ ಹಣದ ಜೊತೆಗೆ ವಸೂಲು ಮಾಡಲಾಗುವುದು.
7. ಬಹಿರಂಗ ಹರಾಜು ಮಾಡುವ ವೇಳೆಯಲ್ಲಿ ಏನಾದರೂ ತಕರಾರುಗಳು ಬಂದಲ್ಲಿ ಕಾರ್ಮಿಕ ಅಧಿಕಾರಿಗಳು ಕೈಗೊಳ್ಳುವ ನಿರ್ಣಯವೇ ಅಂತಿಮ ತೀರ್ಮಾನವಾಗಿರುತ್ತದೆ.
8. ಬಹಿರಂಗ ಹರಾಜನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ಮುಂದೂಡುವ ಅಥವಾ ಕರೆದಿರುವುದನ್ನು ತಿರಸ್ಕರಿಸುವ ಅಧಿಕಾರವನ್ನು ಕಾರ್ಮಿಕ ಅಧಿಕಾರಿಗಳು, ಉಡುಪಿ, ಇವರು ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮ ತೀರ್ಮಾನವಾಗಿರುತ್ತದೆ.
9. ಬಹಿರಂಗ ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಹರಾಜು ಮಾಡಲಿರುವ ಸಾಮಗ್ರಿಗಳನ್ನು ಹೇಗಿದೆಯೋ ಹಾಗೆ ಇರುವ ಸ್ಥಿತಿಯಲ್ಲಿ ಕಾರ್ಮಿಕ ನಿರೀಕ್ಷಕರು, ಕಾರ್ಕಳ ವೃತ್ತ, ವೆಂಕಟರಮಣ ದೇವಸ್ಥಾನ ರಸ್ತೆ, ಕಾರ್ಕಳ ಇವರ ಕಛೇರಿಯಲ್ಲಿ ರಜಾದಿನಗಳನ್ನು ಹೊರತುಪಡಿಸಿ ಕಛೇರಿ ಕೆಲಸದ ಸಮಯದಲ್ಲಿ ಬಿಡ್ಡು ಕರೆಯುವ ದಿನಾಂಕಕ್ಕಿಂತಲೂ ಮುಂಚಿತವಾಗಿ ವೀಕ್ಷಿಸಬಹುದಾಗಿದೆ.
10. ಬಹಿರಂಗ ಹರಾಜು ಮುಗಿದ ನಂತರ ಯಶಸ್ವಿಯಾಗದ ಸವಾಲುದಾರರ ಠೇವಣಿ ಹಣವನ್ನು ಕೂಡಲೇ ಸ್ಥಳದಲ್ಲಿ ಹಿಂದಿರುಗಿಸಲಾಗುವುದು.

**ಎಸ್.ಸಿ. ರಾಮಚಂದ್ರ**

ಪಿ.ಆರ್. 394 ಕಾರ್ಮಿಕ ಅಧಿಕಾರಿ, (ಪ್ರಭಾರ) ಉಡುಪಿ ಜಿಲ್ಲೆ, ಉಡುಪಿ.

## ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು

### ಟೆಂಡರ್ ಪ್ರಕಟಣೆ

**ಸಂಖ್ಯೆ: ಸಂಗ್ರಹ-1(3)106/2003-04, ದಿನಾಂಕ: 17ನೇ ಆಗಸ್ಟ್ 2004**

2002-03ನೇ ಸಾಲಿಗೆ ಪೊಲೀಸ್ ಇಲಾಖೆಗೆ ಅಗತ್ಯವಿರುವ ಈ ಕೆಳಕಂಡ ಸಮವಸ್ತ್ರ ಮತ್ತು ಸಾಧನ ಸಾಮಗ್ರಿಗಳನ್ನು ಸರಬರಾಜು ಮಾಡಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ಹಾಗೂ ನಿಯಮ 2000ರ ಅನುಸಾರ ಮೊಹರು ಮಾಡಿರುವ ದರಪಟ್ಟಿಗಳನ್ನು (ಟೆಂಡರ್) "ದ್ವಿ ಲಕೋಟೆ ಪದ್ಧತಿ" ಯಲ್ಲಿ ಆಹ್ವಾನಿಸಲಾಗಿದೆ. ಟೆಂಡರ್ ಜೊತೆಯಲ್ಲಿ ಭಾಗವಹಿಸುವ ಪ್ರತಿ ಸಾಮಗ್ರಿಯ ಮಾದರಿಯ 2 ಸಾಮಗ್ರಿಗಳನ್ನು ಕಳುಹಿಸಬೇಕಾಗಿರುತ್ತದೆ. ಮಾದರಿಗಳನ್ನು ಹಿಂದಿರುಗಿಸಲಾಗುವುದಿಲ್ಲ.

| ಕ್ರ.ಸಂ. | ಸಾಮಗ್ರಿಯ ಹೆಸರು | ಖರೀದಿಸುವ ಸಾಮಗ್ರಿಯ ಅಂದಾಜು ಪ್ರಮಾಣ |
|---|---|---|
| 1 | 2 | 3 |
| 1 | ಡಿ.ಎಂ.ಎಸ್. ಅಮ್ಯುನೀಷನ್ ಬ್ಲಾಕ್ ಶೂ | 21,487 ಜೊತೆ |
| 2 | ಡಿ.ಎಂ.ಎಸ್. ಆಂಕಲ್ ಬ್ಲಾಕ್ ಶೂ | 28,715 ಜೊತೆ |
| 3 | ಆಂಕ್ಲೆಟ್ ವೆಬ್ | 8,133 ಜೊತೆ |
| 4 | ಬ್ಯಾರೆಟ್ ಕ್ಯಾಪ್ | 4,907 ಸಂಖ್ಯೆ |
| 5 | ಬ್ಯಾರೆಟ್ ಕ್ಯಾಪ್ ಬ್ಯಾಡ್ಜ್ | 661 ಸಂಖ್ಯೆ |
| 6 | ಬ್ರೌನ್ ಆಕ್ಸ್‌ಫರ್ಡ್ ಶೂಸ್ | 387 ಜೊತೆ |
| 7 | ಬ್ಲಾಕ್ ಕ್ರೆಸ್ಟೆಡ್ ಲೆದರ್ ಬೆಲ್ಟ್ | 10,000 ಸಂಖ್ಯೆ |
| 8 | ಬ್ರೌನ್ ಕ್ರೆಸ್ಟೆಡ್ ಲೆದರ್ ಬೆಲ್ಟ್ | 1,008 ಸಂಖ್ಯೆ |
| 9 | ಬಟನ್ ವಿತ್ ರಿಂಗ್ಸ್ | 26,000 ಸಂಖ್ಯೆ |

| 1 | 2 | 3 |
|---|---|---|
| 10 | ಬೂಟ್ ಬ್ರಷ್ | 3,600 ಸಂಖ್ಯೆ |
| 11 | ಬೂಟ್ ಪಾಲಿಷ್ ಟಿನ್ ಬ್ಲಾಕ್ | 2,28,505 ಸಂಖ್ಯೆ |
| 12 | ಬೂಟ್ ಪಾಲಿಷ್ ಟಿನ್ ಬ್ರೌನ್ | 20,425 ಸಂಖ್ಯೆ |
| 13 | ಬ್ಲಾಂಕೋ ಕೇಕ್ಸ್ | 6,328 ಸಂಖ್ಯೆ |
| 14 | ಅಟ್ಯಾಚ್ ಮೆಂಟ್ ಬ್ರಾಸಸ್ | 853 ಜೊತೆ |
| 15 | ಖಾಕಿ ಟೈ | 713 ಸಂಖ್ಯೆ |
| 16 | ಬ್ರಾಸಸ್ ನಾರ್ಮಲ್ | 300 ಜೊತೆ |
| 17 | ಕ್ಯಾನ್ವಾಸ್ ಶೂಸ್ | 22,897 ಜೊತೆ |
| 18 | ಚಿವರನ್ ಬ್ಲಾಕ್ | 690 ಸಂಖ್ಯೆ |
| 19 | ಚಿವರನ್ ರೆಡ್ | 1,519 ಸಂಖ್ಯೆ |
| 20 | ಫೈವ್ ಪಾಯಿಂಟೆಡ್ ಸ್ಟಾರ್ | 2,961 ಜೊತೆ |
| 21 | ಫಸ್ಟ್ ಏಡ್ ಬಾಕ್ಸ್ | 167 ಸಂಖ್ಯೆ |
| 22 | ಎಫ್.ಜಿ. ಹೆಲ್ಮೆಟ್ಸ್ | 8,867 ಸಂಖ್ಯೆ |
| 23 | ಗ್ರೌಂಡ್ ಶೀಟ್ಸ್ | 12,798 ಸಂಖ್ಯೆ |
| 24 | ಹ್ಯಾಂಡ್ ಕಫ್ಸ್ | 1,140 ಜೊತೆ |
| 25 | ಹ್ಯಾವರ್ ಸ್ಯಾಕ್ಸ್ (ಬಿಗ್) | 11,664 ಸಂಖ್ಯೆ |
| 26 | ವೈಟ್ ಹ್ಯಾಂಡ್ ಗ್ಲೋವ್ಸ್ | 6,487 ಜೊತೆ |
| 27 | ಉಲ್ಲನ್ ಜರ್ಸಿ | 10,361 ಸಂಖ್ಯೆ |
| 28 | ಜಂಗಲ್ ಬೂಟ್ | 14,284 ಜೊತೆ |
| 29 | ಕಿಟ್ ಬ್ಯಾಗ್ ವಿತ್ ಕ್ಲಾಂಪ್ | 150 ಸಂಖ್ಯೆ |
| 30 | ಖಾಕಿ ಸ್ಲೌಚ್ ಹ್ಯಾಟ್ (ಸಿವಿಲ್ / ಡಿ.ಎ.ಆರ್. / ಕೆ.ಎಸ್.ಆರ್.ಪಿ. ಮತ್ತು ವೈರ್‌ಲೆಸ್) | 59,015 ಸಂಖ್ಯೆ |
| 31 | ಖಾಕಿ ಡ್ರಿಲ್ ಕ್ಲಾತ್ (ಸಿಂಗಲ್ ವಿಡ್ತ್) | 67,628 ಮೀಟರ್ಸ್ |
| 32 | ಖಾಕಿ ಮೇಟಿ ಎಫ್.ಎ. ಶರ್ಟ್ ಕ್ಲಾತ್ | 1,006 ಮೀಟರ್ಸ್ |
| 33 | ವೈಟ್ ಸ್ಲೌಚ್ ಹ್ಯಾಟ್ | 4,054 ಸಂಖ್ಯೆ |
| 34 | ಖಾಕಿ ಟೆರಿಕಾಟ್ ಕ್ಲಾತ್ | 2,41,971 ಮೀಟರ್ಸ್ |
| 35 | ಖಾಕಿ ಟೆರಿಕಾಟ್ ಸ್ಯಾರೀಸ್ ವಿತ್ ಬ್ಲೌಸ್ | 1,328 ಸಂಖ್ಯೆ |
| 36 | ಲೀಡಿಂಗ್ ಚೈನ್ | 135 ಸಂಖ್ಯೆ |
| 37 | ಲೇಡೀಸ್ ಶೂಸ್ (ಬ್ಲಾಕ್ ಆಕ್ಸ್‌ಫರ್ಡ್ ಶೂಸ್) | 268 ಜೊತೆ |
| 38 | ಜಂಗಲ್ ಕಮಾಂಡೋ ಡಾಂಗ್ರೀಸ್ | 1,970 ಸಂಖ್ಯೆ |
| 39 | ಸೆರಮೋನಿಯಲ್ ಡ್ರೆಸಸ್ | 3,995 ಸೆಟ್ |
| 40 | ರಿಬ್ಬನ್ಸ್ | 4,244 ಜೊತೆ |
| 41 | ಲೆದರ್ ಪೋಚಸ್ | 5,488 ಸಂಖ್ಯೆ |
| 42 | ಲೆದರ್ ಫ್ರಾಗ್ ಬಯೋನೆಟ್ | 11,517 ಸಂಖ್ಯೆ |
| 43 | ಮಸ್ಕಿಟೋ ನೆಟ್ | 2,143 ಸಂಖ್ಯೆ |
| 44 | ಮೆಟಲ್ ನಂಬರ್ಸ್ | 10,591 ಸಂಖ್ಯೆ |
| 45 | ಪೀಕ್ ಕ್ಯಾಪ್ | 4,030 ಸಂಖ್ಯೆ |
| 46 | ಪೀಕ್ ಕ್ಯಾಪ್ ಬ್ಯಾಡ್ಜಸ್ | 948 ಸಂಖ್ಯೆ |
| 47 | ಪಿ.ಟಿ. ವೆಸ್ಟ್ | 44,929 ಸಂಖ್ಯೆ |
| 48 | ಪ್ಯಾಕ್ ಸಪೋರ್ಟಿಂಗ್ ವೆಬ್ | 739 ಜೊತೆ |
| 49 | ಪ್ಯಾಕ್ ವೆಬ್ 08 | 42 ಸಂಖ್ಯೆ |
| 50 | ರೆಡ್ ಶಾಸ್ | 119 ಸಂಖ್ಯೆ |
| 51 | ರೈಫಲ್ ಸ್ಲಿಂಗ್ ವೆಬ್ | 6,736 ಸಂಖ್ಯೆ |
| 52 | ರಿವಾಲ್ವರ್ ಹೋಲ್ಸ್‌ಟರ್ ವೆಬ್ | 618 ಸಂಖ್ಯೆ |
| 53 | ಸ್ಯಾಮ್ ಬ್ರೌನ್ ಬೆಲ್ಟ್ | 626 ಸಂಖ್ಯೆ |

| 1 | 2 | 3 |
|---|---|---|
| 54 | ಸ್ಟ್ರಾಪ್ ಶೋಲ್ಡರ್ ಲೆಫ್ಟ್ ಅಂಡ್ ರೈಟ್ | 644 ಜೊತೆ |
| 55 | ಖಾಕಿ ರೈನ್ ಕೋಟ್ | 6,628 ಸಂಖ್ಯೆ |
| 56 | ವೈಟ್ ರೈನ್ ಕೋಟ್ | 220 ಸಂಖ್ಯೆ |
| 57 | ವೈಟ್ ಟೆರಿಕಾಟ್ ಕ್ಲಾತ್ | 9,753 ಮೀಟರ್ಸ್ |
| 58 | ವಿಷಲ್ ವಿತ್ ಚೈನ್ | 10,026 ಸಂಖ್ಯೆ |
| 59 | ವಿಷಲ್ ಕಾರ್ಡ್ ಖಾಕಿ | 1,884 ಸಂಖ್ಯೆ |
| 60 | ವಿಷಲ್ ಕಾರ್ಡ್ ರೆಡ್ | 142 ಸಂಖ್ಯೆ |
| 61 | ಉಲ್ಲನ್ ಓವರ್ ಕೋಟ್ | 6,132 ಸಂಖ್ಯೆ |
| 62 | ಉಲ್ಲನ್ ಸಾಕ್ಸ್ | 1,56,080 ಜೊತೆ |
| 63 | ಉಲ್ಲನ್ ಬ್ಲಾಂಕೆಟ್ | 3,854 ಸಂಖ್ಯೆ |
| 64 | ವೆಬ್ ಬೆಲ್ಟ್ | 2,052 ಸಂಖ್ಯೆ |
| 65 | ರೆಸ್ಪಿರೇಟರ್ಸ್ | 2,682 ಸಂಖ್ಯೆ |
| 66 | ಲೆದರ್ ಜರ್ಕಿನ್ | 14 ಸಂಖ್ಯೆ |
| 67 | ವಾಟರ್ ಬಾಟಲ್ | 8,128 ಸಂಖ್ಯೆ |
| 68 | ಪೊಲೀಸ್ ಫ್ಲಾಗ್ | 74 ಸಂಖ್ಯೆ |
| 69 | ಸ್ವಾರ್ಡ್ಸ್ | 23 ಸಂಖ್ಯೆ |
| 70 | ರಿಫ್ಲೆಕ್ಟೆಡ್ ಬ್ಯಾಂಡ್ಸ್ | 398 ಸಂಖ್ಯೆ |
| 71 | ಫ್ರಾಗ್ ವೆಬ್ ಬಯೋನೆಟ್ | 2,275 ಸಂಖ್ಯೆ |
| 72 | ಸರ್ಚ್ ಲೈಟ್ | 40 ಸಂಖ್ಯೆ |

**ಸೂಚನೆ:** ಮೇಲಿನ ಕಿಟ್ ಸಾಮಗ್ರಿಗಳ ಉತ್ಪಾದಕರು/ಉತ್ಪಾದಕ ಘಟಕ/ಉತ್ಪಾದಕ ಘಟಕದ ಅಧಿಕೃತ ಏಜೆಂಟುದಾರರು, ಪ್ರಖ್ಯಾತ ಕಂಪನಿಯ ಬ್ರಾಂಡ್‌ಗಳಿಗೆ ಆದ್ಯತೆ ನೀಡಲಾಗುವುದು.

2. ವಿವರ ಹಾಗೂ ಷರತ್ತನ್ನು ಒಳಗೊಂಡ ಟೆಂಡರ್ ಅರ್ಜಿಯನ್ನು ನಿರ್ದಿಷ್ಟತೆಯೊಂದಿಗೆ (Specifications) ದಿನಾಂಕ: 30.8.2004 ರಿಂದ 20.9.2004 ರವರೆಗೆ ಕಛೇರಿಯ ಕೆಲಸದ ದಿನದಂದು ಬೆಳಿಗ್ಗೆ 10 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿಯ ಬೆಲೆ ರೂ. 200-00 ಆಗಿದ್ದು, ಇದನ್ನು ಮರುಪಾವತಿ ಮಾಡಲಾಗುವುದಿಲ್ಲ. ಟೆಂಡರ್ ಅರ್ಜಿಯನ್ನು ನಗದು ಅಥವಾ ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿಯಾರ್ಡರ್ ಮೂಲಕ ಪಾವತಿಸಿದರೆ ಅಂಗೀಕರಿಸುವುದಿಲ್ಲ) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯ ಬಯಸುವವರು ರೂ.200/- ಗಳಿಗೆ ಡಿ.ಡಿ. ಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರುರವರ ಹೆಸರಿನಲ್ಲಿ ಪಡೆದು ಕಳುಹಿಸಲು ಹಾಗೂ ಸ್ವವಿಳಾಸದೊಂದಿಗೆ ಲಕೋಟೆಯ ಮೇಲೆ ರೂ. 50.00 ಗಳ ಅಂಚೆ ಚೀಟಿಯನ್ನು ಅಂಟಿಸಿ ಕಳುಹಿಸಲು ಕೋರಿದೆ.

3. ಟೆಂಡರ್ ಅರ್ಜಿಯನ್ನು ಮೊಹರು ಮಾಡಿದ ಎರಡು ಪ್ರತ್ಯೇಕ ಕವರುಗಳಲ್ಲಿ ಈ ಕೆಳಕಂಡಂತೆ ಕಳುಹಿಸಬೇಕಾಗಿರುತ್ತದೆ.

ಅ) ಮೊಹರು ಮಾಡಿದ **ಒಂದನೇ ಕವರಿನ** ಮೇಲ್ಭಾಗದಲ್ಲಿ "ಕಿಟ್ ಸಾಮಗ್ರಿಗಳ ಸರಬರಾಜಿಗಾಗಿ ಇ.ಎಂ.ಡಿ. ಮತ್ತು ಇತರೆ ವಿವರಣೆ" ಎಂದು ಹಾಗೂ ಕವರಿನ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.

ಆ) ಮೊಹರು ಮಾಡಿದ **ಎರಡನೇ ಕವರಿನ** ಮೇಲ್ಭಾಗದಲ್ಲಿ "ಕಿಟ್ ಸಾಮಗ್ರಿಗಳ ಬೆಲೆ ಪಟ್ಟಿ" ಎಂದು ಮತ್ತು ಕವರಿನ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.

4. **ಮೊದಲನೆ ಕವರ್:** ಮೊಹರು ಮಾಡಿದ ಮೊದಲನೆ ಕವರ್ ಈ ಕೆಳಕಂಡ ಮಾಹಿತಿಯನ್ನು ಒಳಗೊಂಡಿರಬೇಕು.

ಅ) ಸರಬರಾಜು ಮಾಡಲು ಇಚ್ಛಿಸುವ ಪ್ರತಿಯೊಂದು ಸಾಮಗ್ರಿಗಳಿಗೆ ಇ.ಎಂ.ಡಿ.ಯ ಬಾಬ್ತು ಪ್ರತ್ಯೇಕವಾಗಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರುರವರ ಹೆಸರಿನಲ್ಲಿ ಪಡೆದ ಡಿಮ್ಯಾಂಡ್ ಡ್ರಾಫ್ಟ್‌ಗಳು (ಇ.ಎಂ.ಡಿ.ಯಲ್ಲಿ ನಮೂದಿಸಲಾದ ಸಾಮಗ್ರಿಯ ಒಟ್ಟು ಬೆಲೆಗೆ ಶೇಕಡ 2 ರಷ್ಟು ಇರಬೇಕು) ಸರಬರಾಜು ಮಾಡುವ ಪ್ರತಿಯೊಂದು ಸಾಮಗ್ರಿಗಳಿಗೆ ಪ್ರತ್ಯೇಕ ಇ.ಎಂ.ಡಿ.ಗಳನ್ನು ಸಲ್ಲಿಸಬೇಕು. ಇಲ್ಲದಿದ್ದಲ್ಲಿ ಪರಿಗಣಿಸಲಾಗುವುದಿಲ್ಲ.

ಆ) ಸರಬರಾಜು ಮಾಡುವ ಸಂಸ್ಥೆಯ ಸಾಮರ್ಥ್ಯದ ಬಗ್ಗೆ ಮಾಹಿತಿ ಮತ್ತು ಸರಬರಾಜು ಮಾಡುವ ಸಾಮಗ್ರಿಗಳನ್ನು ಉತ್ಪಾದಿಸಲಾಗುತ್ತಿದೆಯೇ ಅಥವಾ ಇಲ್ಲವೆ ಎಂಬ ಬಗ್ಗೆ ದಾಖಲಾತಿ

ಇ) ಆರ್ಥಿಕ ಸ್ಥಿತಿ ಮತ್ತು ಸಾಮರ್ಥ್ಯದ ಬಗ್ಗೆ.

ಈ) ಮಾರಾಟ ತೆರಿಗೆ ಮತ್ತು ಆದಾಯ ತೆರಿಗೆ ಬಗ್ಗೆ.

ಉ) ವಾರ್ಷಿಕ ವಹಿವಾಟು

ಊ) ಟೆಂಡರ್ ಅರ್ಜಿದಾರರು ಸರಬರಾಜು ಮಾಡಲು ಬಯಸುವ ಸಾಮಗ್ರಿಗಳ ಪಟ್ಟಿ, ಪಟ್ಟಿಯಲ್ಲಿ ಬೆಲೆಯನ್ನು ನಮೂದಿಸಬಾರದು.

ಖು) ಅನುಭವ ಮತ್ತು ಹಿಂದೆ ಸರಬರಾಜು ಮಾಡಿರುವ ಬಗ್ಗೆ.

5. **ಎರಡನೆ ಕವರ್:** ಮೊಹರು ಮಾಡಿದ ಎರಡನೇ ಕವರ್ ಟೆಂಡರ್ ಅರ್ಜಿ ಮತ್ತು ಸರಬರಾಜು ಮಾಡುವ ಸಾಮಗ್ರಿಯ ಹೆಸರು ಮತ್ತು ಬೆಲೆ ಪಟ್ಟಿಯನ್ನು ಮಾತ್ರ ಹೊಂದಿರಬೇಕು.

6. ಸರಬರಾಜು ಮಾಡಲು ಇಚ್ಚಿಸುವ ಪ್ರತಿಯೊಂದು ಸಾಮಗ್ರಿಗಳ ಮಾದರಿಯ 2 ಸಾಮಗ್ರಿಗಳನ್ನು ತಪ್ಪದೆ ದಿನಾಂಕ: 28.9.2004ರ ಸಂಜೆ 5 ಗಂಟೆ ಒಳಗೆ ಪ್ರತ್ಯೇಕವಾಗಿ ಸಲ್ಲಿಸತಕ್ಕದ್ದು. ತದನಂತರ ಸಲ್ಲಿಸುವ ಮಾದರಿಗಳನ್ನು ಪರಿಗಣಿಸಲಾಗುವುದಿಲ್ಲ.

7. ಮೊಹರು ಮಾಡಿದ ಎರಡು ಕವರ್‌ಗಳನ್ನು ಮೇಲೆ ತಿಳಿಸಿದ ರೀತಿಯಲ್ಲಿ ಶ್ರೀ ಎಸ್. ರಾಮಕೃಷ್ಣ, ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ (ಕೇಂದ್ರಸ್ಥಾನ-1) ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಕಛೇರಿ, ನೃಪತುಂಗ ರಸ್ತೆ, ಬೆಂಗಳೂರು-560001 ರವರ ಹೆಸರಿಗೆ ದಿನಾಂಕ: 28.9.2004ರ ಸಂಜೆ 5.00 ಗಂಟೆ ಒಳಗೆ ತಲುಪುವಂತೆ ಸಲ್ಲಿಸತಕ್ಕದ್ದು ತದನಂತರ ಸಲ್ಲಿಸಲಾದ/ಪಡೆದ ಅರ್ಜಿಗಳನ್ನು ಪರಿಗಣಿಸುವುದಿಲ್ಲ.

8. ಟೆಂಡರ್ ಆಹ್ವಾನಿಸುವ ಪ್ರಾಧಿಕಾರಿಯು ಟೆಂಡರಿನ ಮೊದಲನೆಯ ಕವರನ್ನು ದಿನಾಂಕ: 29.9.2004 ರಂದು ಬೆಳಿಗ್ಗೆ 11.00 ಗಂಟೆಗೆ ಟೆಂಡರುದಾರರು ಅಥವಾ ಅವರ ಪ್ರತಿನಿಧಿಗಳ ಹಾಗೂ ಎ.ಡಿ.ಜಿ.ಪಿ. (ಆಡಳಿತ) ರವರ ಸಮ್ಮುಖದಲ್ಲಿ ತೆರೆಯಲಾಗುವುದು. ತದನಂತರ ಟೆಂಡರು ಸಲ್ಲಿಸಿರುವ ಸಂಸ್ಥೆಗಳ ಮಾಹಿತಿಗಳನ್ನು/ದಾಖಲಾತಿಗಳನ್ನು ಪರಿಶೀಲಿಸಿ, ಅರ್ಹ ಸಂಸ್ಥೆಗಳ ಪಟ್ಟಿಯನ್ನು ತಯಾರಿಸಿ, ನೇರ ಖರೀದಿ ಸಮಿತಿಯ ಮುಂದೆ ಮಂಡಿಸಲಾಗುವುದು.

9. ಪ್ರತಿ ಸಾಮಗ್ರಿಗಳಿಗೆ ಪ್ರತ್ಯೇಕವಾದ ಇ.ಎಂ.ಡಿ.ಯನ್ನು ಡಿ.ಡಿ. ಮೂಲಕ ಪಾವತಿಸದಿದ್ದರೆ, ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಟೆಂಡರ್‌ದಾರರು ಅಂಚೆ ಮೂಲಕ/ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿಗಳು ಮತ್ತು ದಾಖಲಾತಿಗಳು ವಿಳಂಬವಾಗಿ ತಲುಪಿದ್ದಲ್ಲಿ/ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಾಗಿರುವುದಿಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೇ ಸಾರಾಸಗಟಾಗಿ/ಭಾಗಶಃ ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್

ಪಿ.ಆರ್. 395 ಜನರಲ್ ಆಫ್ ಪೊಲೀಸ್‌ರವರ ಪರವಾಗಿ, ಬೆಂಗಳೂರು.

## ಜಲಸಂಪನ್ಮೂಲ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್ ಕಛೇರಿ, ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ

## ಟೆಂಡರ್ ತಿದ್ದುಪಡಿ ಪ್ರಕಟಣೆ 2004-2005

**ಅಲ್ಪಾವಧಿ ಟೆಂಡರ್ ಪ್ರಕಟಣೆ ಸಂಖ್ಯೆ: ಬಿಡಿಎನ್-4/ಪಿ.ಬಿ.-4/ಟೆಂಡರ್ ಪ್ರಕಟಣೆ/2004-05/378/12**

**ದಿನಾಂಕ: 13ನೇ ಮೇ 2004 ರಲ್ಲಿ ಹೊರಡಿಸಿರುವ ಟೆಂಡರ್ ಪ್ರಕಟಣೆಯಲ್ಲಿ ಈ ಕೆಳಗಿನಂತೆ ತಿದ್ದುಪಡಿ ಮಾಡಲಾಗಿದೆ.**

1) ಶೇಕಡವಾರು ಟೆಂಡರ್ ಬದಲು ಐಟಂವಾರು ಟೆಂಡರ್
2) ನಿಗದಿತ ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕ: 16.10.04 ಸಂಜೆ 5.30 ಗಂಟೆಯವರೆಗೆ
3) ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: 19.10.2004
4) ತುಂಬಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: 20.10.2004 ಸಂಜೆ 4.00 ಗಂಟೆಯವರೆಗೆ
5) ಟೆಂಡರ್ ಫಾರಂ ಬೆಲೆ ತೆರಿಗೆಗಳು ಸೇರಿ ಬದಲು ತೆರಿಗೆಗಳು ಪ್ರತ್ಯೇಕ. ಟೆಂಡರ್ ಪ್ರಕಟಣೆಯ ಉಳಿದ ಷರತ್ತುಗಳಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

**ಆರ್. ವೈಕುಂಠಯ್ಯ**

ಪಿ.ಆರ್. 397 ಕಾರ್ಯಪಾಲಕ ಇಂಜಿನಿಯರ್,

ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.

## ಜಲಸಂಪನ್ಮೂಲ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ

## ಟೆಂಡರ್ ತಿದ್ದುಪಡಿ ಪ್ರಕಟಣೆ

**ವಿಷಯ:** ಟೆಂಡರ್ ಪ್ರಕಟಣೆಗೆ ತಿದ್ದುಪಡಿ ಮಾಡುವ ಕುರಿತು.

**ಉಲ್ಲೇಖ:** 1) ಈ ಕಛೇರಿಯ ಟೆಂಡರ್ ಪ್ರಕಟಣೆಯ ಪತ್ರದ ನಂ.ಕಾ.ಇ/ಬಿಡಿಎನ್-4/ಪಿ.ಬಿ-1/ಟೆಂಡರ್ ಪ್ರಕಟಣೆ 2004-05/324/20 ದಿನಾಂಕ: 10.5.2004.

2) - " - ಅವಧಿ ವಿಸ್ತರಣೆಯ ಪತ್ರದ ನಂ.608 ದಿನಾಂಕ: 11.6.2004.

ಮೇಲ್ಕಂಡ ವಿಷಯದ ಕುರಿತಂತೆ ಉಲ್ಲೇಖಿತ ಪತ್ರ 1 ರಲ್ಲಿ ಟೆಂಡರ್ ಪ್ರಕಟಣೆಯನ್ನು ನಾಲ್ಕು ಕೆಲಸಗಳಿಗೆ ಟೆಂಡರ್ ಕರೆಯಲಾಗಿದ್ದು ತದ ನಂತರ ಉಲ್ಲೇಖಿತ ಪತ್ರ 2 ರಲ್ಲಿ ಅವಧಿ ವಿಸ್ತರಣೆಯನ್ನು ಮಾಡಲಾಗಿರುತ್ತದೆ. ಸದರಿ ಟೆಂಡರ್‌ನ ಪ್ರಕಟಣೆಯ ಕುರಿತು ಈ ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದೆ.

| | | ಗುತ್ತಿಗೆದಾರರ ದರ್ಜೆ |
|---|---|---|
| 1) | ಭದ್ರಾ ಡ್ಯಾಂ ಟಾಪ್‌ನ ಐ.ಬಿ. ರೂಂ ಅನ್ನು ವಿಸ್ತರಿಸುವುದು. ಹಾಗೂ ನಾಲ್ಕು ರೂಂ ಗಳನ್ನು ಕಟ್ಟುವ ಕೆಲಸದ ಬಗ್ಗೆ. | ಒಂದನೇ ದರ್ಜೆಯ ಬದಲು ಎರಡನೇ ದರ್ಜೆ ಮತ್ತು ಮೇಲ್ಪಟ್ಟು. |
| 2) | ಟೆಂಡರ್ ಫಾರಂನ ಬೆಲೆ (ಎಲ್ಲಾ 4 ಕೆಲಸಗಳಿಗೆ) | ರೂಪಾಯಿಗಳು + ತೆರಿಗೆಗಳು ಪ್ರತ್ಯೇಕ |

ಆರ್. ವೈಕುಂಠಯ್ಯ

ಪಿ.ಆರ್. 398

ಕಾರ್ಯಪಾಲಕ ಇಂಜಿನಿಯರ್,

ನಂ.4, ಬಿ.ಆರ್.ಎಲ್.ಬಿ.ಸಿ. ವಿಭಾಗ, ಭದ್ರಾವತಿ.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರ ಕಛೇರಿಯ ಪ್ರಕಟಣೆ**

**ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ: ಎ5-ಎಸ್‌ಎಎಸ್-ಮಾರಾಟ-ಸಿಆರ್-59/2004-05, ದಿನಾಂಕ: 19ನೇ ಆಗಸ್ಟ್ 2004**

**ವಿಷಯ:** ಚನ್ನಪಟ್ಟಣ ಅರಣ್ಯ ವಲಯದ ತೆಂಗಿನಕಲ್ಲು ಮತ್ತು ಕದಿರೆಮಂಗಲ ನೆಡುತೋಪಿನಲ್ಲಿ ಬಂಗಾಳಿಜಾಲಿ (ಅಕೇಶಿಯಾ) ಮತ್ತು ನೀಲಗಿರಿ ಎಳೆಗಳನ್ನು ಕಡಿದು ಸ್ಥಳದಲ್ಲೇ ಲಾಟ್ ಮಾಡಿರುವ ನಾಟ ಮತ್ತು ಉರುವಲು ಸೌದೆಯ ಬಹಿರಂಗ ಹರಾಜು ಕುರಿತು.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಬೆಂಗಳೂರು ಗ್ರಾಮಾಂತರ ಅರಣ್ಯ ವಿಭಾಗದ ಚನ್ನಪಟ್ಟಣ ಅರಣ್ಯ ವಲಯದ ತೆಂಗಿನಕಲ್ಲು ಮತ್ತು ಕದರಮಂಗಲ ನೆಡುತೋಪಿನಲ್ಲಿ ಕತ್ರಾವಣೆ ಮಾಡಿ ಸ್ಥಳದಲ್ಲೆ ಲಾಟ್ ಮಾಡಿರುವ ಈ ಕೆಳಕಂಡ ಬಂಗಾಲಿ ಜಾಲಿ (ಅಕೇಶಿಯಾ) ಮತ್ತು ನೀಲಗಿರಿ ಎಳೆಗಳನ್ನು ಬಹಿರಂಗ ಹರಾಜು ಮೂಲಕ ದಿನಾಂಕ: 15.09.2004 ರಂದು ಬೆಳಿಗ್ಗೆ 11.00 ಗಂಟೆಗೆ ತೆಂಗಿನಕಲ್ಲು ಅರಣ್ಯ ಪ್ರದೇಶದಲ್ಲಿ ಬೆಂಗಾಲಿ ಜಾಲಿ (ಅಕೇಶಿಯಾ) ಮತ್ತು ಬೆಂಗಾಲಿ ಸೌದೆ ಮತ್ತು 3.00 ಗಂಟೆಗೆ ಕದರಮಂಗಲ ಅರಣ್ಯ ಪ್ರದೇಶದಲ್ಲಿ ನೀಲಗಿರಿ ಎಳೆಗಳು ಕೆಳಸಹಿದಾರರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕೃತ ಅಧಿಕಾರಿಯು ಕೆಳಕಂಡ ಷರತ್ತುಗಳ ಮೇಲೆ ಬಹಿರಂಗ ಹರಾಜನ್ನು ಮಾಡಲು ಉದ್ದೇಶಿಸಲಾಗಿದೆ.

**ಷೆಡ್ಯೂಲ್**

| ಕ್ರ. ಸಂ. | ವಿವರಗಳು (ಬೆಂಗಾಲಿ ಜಾಲಿ ಮತ್ತು ನೀಲಗಿರಿ ನಾಟ / ಉರುವಲು ಸೌದೆ) | ಅಂದಾಜು ಪ್ರಮಾಣ | ಮಾರಾಟದ ದಿನಾಂಕ | ಇಎಂಡಿ (ಪ್ರತಿ ಲಾಟಿಗೆ) |
|---|---|---|---|---|
| 1 | 90 ಲಾಟುಗಳು | 3979 ಎಳೆಗಳು. | 15.09.2004 11.00 ಗಂಟೆಗೆ | 5,000.00 |
| 2 | 44 ಲಾಟುಗಳು (ಉರುವಲು ಸೌದೆ) | 202.73 Cmtr. (ತೆಂಗಿನಕಲ್ಲು) | | |
| 3 | 550 | ನೀಲಗಿರಿ ಎಳೆಗಳು (ಕದರಮಂಗಲ) | 3.00 ಗಂಟೆಗೆ | |

**ಷರತ್ತುಗಳು:**

1. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು 5,000.00 ರೂ.ಗಳ ಇ.ಎಂ.ಡಿ. ಠೇವಣಿ ಇಡಬೇಕಾಗುತ್ತದೆ.
2. ಷೆಡ್ಯೂಲ್‌ನಲ್ಲಿ ಸೂಚಿಸಿರುವ ನಿಗದಿತ ಸಮಯ ಮತ್ತು ದಿನಾಂಕದಂದು ಬಹಿರಂಗ ಹರಾಜನ್ನು ನಡೆಸಲಾಗುವುದು.
3. ಹರಾಜಿನಲ್ಲಿ ಭಾಗವಹಿಸುವ ಮೊದಲು ಷೆಡ್ಯೂಲಿನಲ್ಲಿ ನಮೂದಿಸಿರುವ ಇಡುಗಂಟನ್ನು (ಇ.ಎಂ.ಡಿ.) ನಗದು ರೂಪದಲ್ಲಿ ಪಾವತಿಸತಕ್ಕದ್ದು.
4. ಇಡುಗಂಟನ್ನು ಜಮಾ ಮಾಡದೇ ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸುವ ಹಕ್ಕು ಇರುವುದಿಲ್ಲ.
5. ಷೆಡ್ಯೂಲ್‌ನಲ್ಲಿ ಸೂಚಿಸಿರುವ ಮತ್ತು ಕತ್ರಾವಣೆ ಮಾಡಿ ಲಾಟ್ ಮಾಡಿರುವ ಬೆಂಗಾಲಿಜಾಲಿ (ಅಕೇಶಿಯಾ) ಮತ್ತು ನೀಲಗಿರಿ ಎಳೆಗಳು ಮತ್ತು ಉರುವಲು ಸೌದೆಯನ್ನು ಪರಿಶೀಲಿಸಿ ಖಚಿತಪಡಿಸಿಕೊಂಡ ನಂತರ ಹರಾಜಿನಲ್ಲಿ ಭಾಗವಹಿಸಬೇಕು.
6. ಷೆಡ್ಯೂಲ್‌ನಲ್ಲಿ ತೋರಿಸಿರುವ ಪ್ರತಿ ಲಾಟ್‌ಗೆ ಪ್ರತ್ಯೇಕ ಹರಾಜು ಮಾಡಲಾಗುವುದು.
7. ಯಶಸ್ವಿ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಲ್ಲಿ ವಿಲೇವಾರಿ ಮಾಡಿಕೊಳ್ಳತಕ್ಕದ್ದು.
8. ನಾಟಗಳನ್ನು ಸಾಗಿಸಲು ಪರವಾನಗಿಯನ್ನು ನೀಡಲಾಗುವುದು. ಪರವಾನಗಿ ಶುಲ್ಕವನ್ನು ಯಶಸ್ವಿ ಬಿಡ್‌ದಾರರು ವಲಯ ಅರಣ್ಯಾಧಿಕಾರಿ, ಚನ್ನಪಟ್ಟಣರವರಿಗೆ ಜಮಾ ಮಾಡತಕ್ಕದ್ದು.
9. ಅತಿ ಹೆಚ್ಚು ಬಿಡ್‌ದಾರರು ಹರಾಜಿನ ದಿನದಂದೇ ತಾವು ಸೂಚಿಸಿದ ಹರಾಜಿನ ಮೊತ್ತದ ಶೇಕಡ 25 ರಷ್ಟು ಹಣವನ್ನು ಹಾಗೂ ಸೂಚಿಸಿದ ಮೊತ್ತಕ್ಕೆ ಅನ್ವಯಿಸುವ ಪೂರ್ಣ ತೆರಿಗೆಗಳನ್ನು ಜಮಾ ಮಾಡತಕ್ಕದ್ದು. ತಪ್ಪಿದಲ್ಲಿ ಇ.ಎಂ.ಡಿ. ಮೊತ್ತವನ್ನು ಮುಟ್ಟುಗೋಲು ಹಾಕಿಕೊಂಡು 2ನೇ ಬಿಡ್‌ದಾರರನ್ನು ಯಶಸ್ವಿ ಬಿಡ್ಡುದಾರರೆಂದು ಪರಿಗಣಿಸಲಾಗುವುದು.
10. ಬಿಡ್‌ದಾರರು ಈ ಕಛೇರಿಯಿಂದ ಕಾರ್ಯಾದೇಶ ಪಡೆದ 7 ದಿನಗಳೊಳಗಾಗಿ ನಾಟಾ ಮತ್ತು ಉರುವಲು ಸೌದೆಯನ್ನು ತೆಗೆದುಕೊಂಡು ಹೋಗತಕ್ಕದ್ದು.
11. ಯಶಸ್ವಿ ಬಿಡ್‌ದಾರರಿಗೆ ಆಗುವ ಲಾಭ ಅಥವಾ ನಷ್ಟಗಳಿಗೆ ಇಲಾಖೆ ಜವಾಬ್ದಾರಿಯಲ್ಲ.
12. ಬಹಿರಂಗ ಹರಾಜಿನಲ್ಲಿ ಉದ್ಭವಿಸಬಹುದಾದ ತಂಟೆತಕರಾರುಗಳಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.

13. ಕಪ್ಪು ಪಟ್ಟಿಯಲ್ಲಿರುವ ಬಿಡ್‌ದಾರರು ಅಥವಾ ದಿವಾಳಿಯಾಗಿರುವವರು ಈ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುವುದಿಲ್ಲ.
14. ಹರಾಜಿನ ನಂತರ ಬರುವ ಬೆಲೆಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸಲಾಗುವುದಿಲ್ಲ.
15. ಯಾವುದೇ ತಂಟೆ ತಕರಾರುಗಳಿದ್ದಲ್ಲಿ ಹರಾಜು ಪ್ರಾರಂಭಿಸುವ ಎರಡು ಗಂಟೆ ಮುಂಚಿತವಾಗಿ ಸಂಬಂಧಿಸಿದ ಅಧಿಕಾರಿಗಳ ಗಮನಕ್ಕೆ ಲಿಖಿತ ಮೂಲಕ ತರತಕ್ಕದ್ದು ಹಾಗೂ ಹರಾಜಿನ ನಂತರ ತಡವಾಗಿ ಬರುವ ಯಾವುದೇ ತರಹದ ದೂರುಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.
16. ಯಶಸ್ವಿ ಬಿಡ್‌ದಾರರು ತಮ್ಮ ಬಿಡ್ಡಿನ ಬೆಲೆಯ ಮೇಲೆ ಟಿಂಬರ್‌ಗೆ ಮಾರಾಟ ತೆರಿಗೆ ಶೇಕಡ 14, ಮಾರಾಟ ತೆರಿಗೆಯ ಮೇಲೆ ಸರ್ಚಾರ್ಜ್ ಶೇಕಡ 15, ಅರಣ್ಯ ಅಭಿವೃದ್ಧಿ ತೆರಿಗೆ ಶೇಕಡ 8, ಆದಾಯ ತೆರಿಗೆ ಶೇಕಡ 5 ಮತ್ತು ಆದಾಯ ತೆರಿಗೆ ಮೇಲೆ ಸೆಸ್ ಶೇಕಡ 5, ಮತ್ತು ಉರುವಲು ಸೌದೆಯಾದಲ್ಲಿ ಮಾರಾಟ ತೆರಿಗೆ ಶೇಕಡ 4, ಅರಣ್ಯ ಅಭಿವೃದ್ಧಿ ತೆರಿಗೆ ಶೇಕಡ 8, ಆದಾಯ ತೆರಿಗೆ ಶೇಕಡ 5.
17. ಯಶಸ್ವಿ, ಬಿಡ್‌ದಾರರು ನಿಗದಿತ ಅವಧಿಯಲ್ಲಿ ಎಳೆಗಳು ಅಥವಾ ಉರುವಲು ಸೌದೆಯನ್ನು ಸಾಗಿಸದಿದ್ದ ಪಕ್ಷದಲ್ಲಿ ಹಾಗೂ ಮೇಲ್ಕಂಡ 16ರ ಷರತ್ತಿನನ್ವಯ ಹಣ ಪಾವತಿಸದಿದ್ದಲ್ಲಿ ಇ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ಬಿಡ್‌ದಾರರ ಜವಾಬ್ದಾರಿ ಮೇರೆಗೆ ಎಳೆಗಳು ಮತ್ತು ಉರುವಲು ಸೌದೆಯನ್ನು ಮರು ಹರಾಜು ಮಾಡಲಾಗುವುದು. ಮರು ಹರಾಜಿನಲ್ಲಿ ಕಡಿಮೆ ಬಿಡ್ ಬಂದು ಸರ್ಕಾರಕ್ಕೆ ನಷ್ಟವಾದಲ್ಲಿ ಸೆಕ್ಷನ್ 109ರ ಕರ್ನಾಟಕ ಅರಣ್ಯ ಕಾಯ್ದೆಯಂತೆ ಬಾಕಿ ಭೂಕಂದಾಯ ರೂಪದಲ್ಲಿ ವಸೂಲಿ ಮಾಡಲಾಗುವುದು ಅಥವಾ ಸೆಕ್ಷನ್ 54(54) ಸರಕು ಸಾಮಗ್ರಿಗಳ ಮಾರಾಟದ ಕಾನೂನಿನನ್ವಯ ಅಥವಾ ಸಿವಿಲ್ ಪ್ರೊಸೀಜರ್ ಕೋಡ್ ಅನ್ವಯ ಕ್ರಮ ಕೈಗೊಳ್ಳಲಾಗುವುದು.
18. ವಿವರವಾದ ಷರತ್ತುಗಳು ಹಾಗೂ ಇತರೆ ವಿವರಗಳಿಗೆ ಈ ಕಛೇರಿ ಮತ್ತು ಚನ್ನಪಟ್ಟಣ ವಲಯ ಅರಣ್ಯಾಧಿಕಾರಿಗಳ ಕಛೇರಿಯಲ್ಲಿ, ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದಾಗಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪಿ.ಆರ್. 399   ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು.

**ಕಮಾಂಡೆಂಟ್ ರವರ ಕಛೇರಿ, 1ನೇ ಪಡೆ, ಕರ್ನಾಟಕ ರಾಜ್ಯ ಮೀಸಲು ಪೊಲೀಸ್, ನಂ.60, ರಿಚ್‌ಮಂಡ್ ರಸ್ತೆ, ಬೆಂಗಳೂರು-560025**

**ಪ್ರಕಟಣೆ ಸಂಖ್ಯೆ: ವಾ.ಸಾ.ವಿ.:1:33:2003-04, ದಿನಾಂಕ: 20ನೇ ಆಗಸ್ಟ್ 2004**

**ವಿಷಯ:** ಅನುಪಯುಕ್ತ ವಾಹನವನ್ನು ಸಾರ್ವಜನಿಕರ ಟೆಂಡರ್ ಹಾಗೂ ಹರಾಜು ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಒಂದನೇ ಪಡೆ, ಕೆ.ಎಸ್.ಆರ್.ಪಿ.ಯ ಈ ಕೆಳಕಂಡ ಅನುಪಯುಕ್ತ ವಾಹನಗಳನ್ನು ಟೆಂಡರ್ ಹಾಗೂ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ: 14.9.2004 ರಂದು ಅಪರಾಹ್ನ ಕೊನೆಗೊಳ್ಳಲಿದ್ದು, ಹಾಗೂ ಹರಾಜು ದಿನಾಂಕ: 15.9.2004 ರಂದು ಬೆಳಿಗ್ಗೆ 11.00 ಗಂಟೆಗೆ 1ನೇ ಪಡೆ, ಕೆ.ಎಸ್.ಆರ್.ಪಿ. ವಾಹನ ಸಾರಿಗೆ ವಿಭಾಗದ ಆವರಣದಲ್ಲಿ ನಡೆಸಲಾಗುವುದು. ಇ.ಎಂ.ಡಿ. ಹಣ ರೂ.1,000-00 (ಒಂದು ಸಾವಿರ ಮಾತ್ರ)

| ಕ್ರ.ಸಂ. | ವಾಹನ ಸಂಖ್ಯೆ | ಮಾದರಿ | ಉತ್ಪಾದನಾ ವರ್ಷ |
|---|---|---|---|
| 1 | ಎಂ.ಇ.ಎ. 3559 | ಅಂಬಾಸಿಡರ್ ಕಾರು | 1975 |
| 2 | ಎಂ.ಇ.ವಿ. 8834 | ಯುನಿವರ್ಸಲ್ ಜೀಪು | 1972 |
| 3 | ಎಂ.ವೈ.ವಿ. 6342 | ಯುನಿವರ್ಸಲ್ ಜೀಪು | 1964 |
| 4 | ಸಿ.ಕೆ.ಜಿ. 356 | ಜೀಪ್ | 1986 |
| 5 | ಕೆಎ-01-ಬಿ-100 | ಜೀಪ್ | 1990 |
| 6 | ಸಿ.ಎ.ಬಿ. 3032 | ಮೋಟಾರ್ ಸೈಕಲ್ | 1980 |
| 7 | ಸಿ.ಎ.ಬಿ. 3033 | ಮೋಟಾರ್ ಸೈಕಲ್ | 1980 |
| 8 | ಎಂ.ಇ.ಆರ್. 9203 | ಮೋಟಾರ್ ಸೈಕಲ್ | 1978 |

ಪಿ.ಆರ್. 400   ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ತುಮಕೂರು ಜಿಲ್ಲೆ, ತುಮಕೂರು ರವರ ಕಛೇರಿ ನಡವಳಿಗಳು**

**ಅಧಿಸೂಚನೆ**

**ಟೆಂಡರ್-ಕಂ-ಬಹಿರಂಗ ಹರಾಜು**

**ಸಂಖ್ಯೆ: ಇಎಕ್ಸ್‌ಇ:ಸಿಆರ್‌ಎಂ:38/2003-04, ದಿನಾಂಕ: 19ನೇ ಆಗಸ್ಟ್ 2004**

**ವಿಷಯ:** ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗಿರುವ ಮೋಟಾರು ವಾಹನಗಳನ್ನು ಟೆಂಡರ್-ಕಂ-ಬಹಿರಂಗ ಹರಾಜು ಮೂಲಕ ಮಾರಾಟ ಮಾಡುವ ಬಗ್ಗೆ.

ತುಮಕೂರು ಜಿಲ್ಲೆಯಲ್ಲಿ ವಿವಿಧ ಅಬಕಾರಿ ಮೊಕದ್ದಮೆಯಲ್ಲಿ ಒಳಗೊಂಡಿದ್ದ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿರುವ 6(ಆರು) ಲಾರಿ, 1(ಒಂದು) ಮೆಟಡೋರ್, 101 ಲಘು ವಾಹನಗಳು ಇದರಲ್ಲಿ 4(ನಾಲ್ಕು) ಕಾರು, 86 ದ್ವಿಚಕ್ರ ವಾಹನ, ಹಾಗೂ 11 (ಹನ್ನೊಂದು) ಆಟೋ ರಿಕ್ಷಾಗಳನ್ನು ಟೆಂಡರ್ ಮತ್ತು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುತ್ತದೆ. ಅಬಕಾರಿ ಉಪ

ಅಧೀಕ್ಷಕರು, ತುಮಕೂರು ಉಪವಿಭಾಗ, ಗಾಂಧಿನಗರ, 2ನೇ ಮುಖ್ಯರಸ್ತೆ ತುಮಕೂರು, ಈ ಆವರಣದಲ್ಲಿ ದಿನಾಂಕ: 10.09.2004 ರಂದು ಬೆಳಿಗ್ಗೆ 11.00 ಗಂಟೆಗೆ ನಿಗದಿಪಡಿಸಲಾಗಿದೆ. ಅಬಕಾರಿ ಅಧೀಕ್ಷಕರು, ಮೆ: ಜೆ.ಪಿ.ಡಿಸ್ಟಿಲರೀಸ್ ಪ್ರೈ ಲಿಮಿಟೆಡ್, ಹೆಗ್ಗಡತಿಹಳ್ಳಿ ಕುಣಿಗಲ್ ತಾಲ್ಲೂಕು, ಇವರು ಹರಾಜು ನಿರ್ವಾಹಕ ಅಧಿಕಾರಿಯಾಗಿದ್ದು ಹರಾಜನ್ನು ನಡೆಸುವರು.

ಮೇಲ್ಕಂಡ ಮುಟ್ಟುಗೋಲು ಹಾಕಲಾದ ಮೋಟಾರು ವಾಹನಗಳನ್ನು ಸಾರ್ವಜನಿಕ ವೀಕ್ಷಣೆ / ಪರಿಶೀಲನೆಗಾಗಿ ಮೇಲ್ಕಾಣಿಸಿದ ಸ್ಥಳದಲ್ಲಿ ಮತ್ತು ಅಬಕಾರಿ ನಿರೀಕ್ಷಕರ ಕಛೇರಿ, ತುಮಕೂರು ವಲಯ, ಗಾಂಧಿನಗರ, ತುಮಕೂರು ಇಲ್ಲಿ ನಿಲ್ಲಿಸಿದ್ದು ದಿನಾಂಕ: 08.09.2004 ರಿಂದ ಸಾರ್ವಜನಿಕರು ವೀಕ್ಷಿಸಬಹುದು.

ಈ ಟೆಂಡರ್ ಮತ್ತು ಬಹಿರಂಗ ಹರಾಜಿಗೆ ಸಂಬಂಧಿಸಿದ ನಿಬಂಧನೆಗಳು ಷರತ್ತುಗಳಿಗೆ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್‌ರವರ ಕಛೇರಿ, ಅಥವಾ ಯಾವುದೇ ತಾಲ್ಲೂಕಿನ ಅಬಕಾರಿ ವಲಯ ಕಛೇರಿಗಳನ್ನು ಸಂಪರ್ಕಿಸಬಹುದು. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ದಿನಾಂಕ: 10.9.2004 ರಂದು ಬೆಳಿಗ್ಗೆ 10.00 ಗಂಟೆಯೊಳಗಾಗಿ ಈ ಹರಾಜು ಸ್ಥಳಕ್ಕೆ ಅಥವಾ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ತುಮಕೂರು ಜಿಲ್ಲೆ, ತುಮಕೂರು ಇವರ ಕಛೇರಿಗೆ ತಲುಪುವಂತೆ ಸಲ್ಲಿಸಲು ಸೂಚಿಸಲಾಗಿದೆ.

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರ)
ಪಿ.ಆರ್. 401 ತುಮಕೂರು ಜಿಲ್ಲೆ, ತುಮಕೂರು.

## ಅರಣ್ಯ ಇಲಾಖೆ
## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ದಾವಣಗೆರೆ ವಿಭಾಗ, ದಾವಣಗೆರೆ
## ಹರಾಜು ಪ್ರಕಟಣೆ

**ಸಂಖ್ಯೆ: ಬಿ2:ಎಂಎಫ್‌ಪಿ:ಟೆಂಡರ್:ಸಿಆರ್ 9/2004-05, ದಿನಾಂಕ: 12ನೇ ಆಗಸ್ಟ್ 2004**

**ವಿಷಯ:** 2004-05ನೇ ಸಾಲಿಗೆ ಕಿರು ಅರಣ್ಯ ಉತ್ಪನ್ನಗಳ ಮರು ಟೆಂಡರ್-ಕಂ-ಹರಾಜು ಕುರಿತು.

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, ದಾವಣಗೆರೆ ಅರಣ್ಯ ವಿಭಾಗದ ಈ ಕೆಳಕಂಡ ವಲಯಗಳಲ್ಲಿನ ಅರಣ್ಯ ಪ್ರದೇಶದಲ್ಲಿ ಕಿರು ಅರಣ್ಯ ಉತ್ಪನ್ನಗಳನ್ನು 2004-05ನೇ ಸಾಲಿಗೆ ಸಂಗ್ರಹಿಸಿ ಸಾಗಾಣಿಕೆ ಮಾಡಲು ದಿನಾಂಕ: 25.09.2004 ರಂದು ಈ ಕಛೇರಿಯಲ್ಲಿ **ಅಪರಾಹ್ನ 4.30 ಗಂಟೆಗೆ** ಕೆಳಸಹಿದಾರರು ಅಥವಾ ಅವರಿಂದ ಅಧಿಕೃತವಾಗಿ ನೇಮಕಗೊಂಡಿರುವ ಅಧಿಕಾರಿಗಳು ಹರಾಜು ಮಾಡಲಿರುವರು.

2004-05ನೇ ಸಾಲಿಗೆ ಈ ವಿಭಾಗದಲ್ಲಿ ನೋಂದಾಯಿತ ಅರಣ್ಯ ಗುತ್ತಿಗೆದಾರರು ಭಾಗವಹಿಸಬಹುದಾಗಿದೆ.

| ಕ್ರ. ಸಂ. | ಯುನಿಟ್ ಸಂಖ್ಯೆ | ವಲಯ | ಅರಣ್ಯ ಉತ್ಪನ್ನ ಹಾಗೂ ಪ್ರದೇಶದ ವಿವರ | ಕಾಲಾವಧಿ | ಮುಂಗಡ ಸಂಹಿತ ಠೇವಣಿ (ಇಎಂಡಿ) |
|---|---|---|---|---|---|
| **ಹುಣಸೇ ಪಸಲು** | | | | | |
| 1 | 1 | ದಾವಣಗೆರೆ | ಹುಳಿಯೂರು-ದಾವಣಗೆರೆ ರಸ್ತೆ ಬದಿ 98 ಕಿಮೀ. ರಿಂದ 115 ಕಿಮೀ. | 2004-05 ದಿನಾಂಕ: 30.6.2005 ಅಂತ್ಯಕ್ಕೆ (1 ವರ್ಷ ಅವಧಿಗೆ) | 2000-00 |
| 2 | 2 | ದಾವಣಗೆರೆ | ಹೊಸಪೇಟೆ-ಹರಿಹರ ಮಂಗಳೂರು ರಸ್ತೆ 103 ಕಿಮೀ. ರಿಂದ 129 ಕಿಮೀ. | 2004-05 ದಿನಾಂಕ: 30.6.2005 ಅಂತ್ಯಕ್ಕೆ (1 ವರ್ಷ ಅವಧಿಗೆ) | 2000-00 |
| 3 | 3 | ದಾವಣಗೆರೆ | ಹೊಸಪೇಟೆ-ಹರಿಹರ ಮಂಗಳೂರು ರಸ್ತೆ 129 ಕಿಮೀ. ರಿಂದ 139 ಕಿಮೀ. | 2004-05 ದಿನಾಂಕ: 30.6.2005 ಅಂತ್ಯಕ್ಕೆ (1 ವರ್ಷ ಅವಧಿಗೆ) | 2000-00 |
| 4 | 4 | ಹರಪನಹಳ್ಳಿ | ರಾಷ್ಟ್ರೀಯ ಹೆದ್ದಾರಿ ರಾಜ್ಯ ಹಾಗೂ ಜಿಲ್ಲಾ ರಸ್ತೆ | 2004-05 ದಿನಾಂಕ: 30.6.2005 ಅಂತ್ಯಕ್ಕೆ (1 ವರ್ಷ ಅವಧಿಗೆ) | 2000-00 |
| 5 | 5 | ಹೊನ್ನಾಳಿ | ರಾಷ್ಟ್ರೀಯ ಹೆದ್ದಾರಿ ರಾಜ್ಯ ಹಾಗೂ ಜಿಲ್ಲಾ ರಸ್ತೆ (ಹೊನ್ನಾಳಿ ಸವಳಂಗ ರಸ್ತೆ 14 ಕಿಮೀ. ರಿಂದ 16 ಕಿಮೀ. ರವರೆಗೆ ಸಾಲಬಾಳು (ಗ್ರಾಮ ಅರಣ್ಯ ಸಮಿತಿಗೆ ಕಾಯ್ದಿರಿಸಿದೆ) | 2004-05 ದಿನಾಂಕ: 30.6.2005 ಅಂತ್ಯಕ್ಕೆ (1 ವರ್ಷ ಅವಧಿಗೆ) | 2000-00 |

### ನಿಬಂಧನೆಗಳು

1. ಟೆಂಡರ್ ಫಾರಂನ್ನು ರೂ.200-00 ಮತ್ತು ತೆರಿಗೆಗಳನ್ನು ಪಾವತಿ ಮಾಡಿ ಹರಾಜಿನ ದಿನ ಮಧ್ಯಾಹ್ನ 1.00 ಗಂಟೆಯ ಒಳಗಾಗಿ ಈ ಕಛೇರಿಯಲ್ಲಿ ಪಡೆಯಬಹುದಾಗಿದೆ.
2. ಹರಾಜಿನಲ್ಲಿ ಭಾಗವಹಿಸುವವರು ಇಎಂಡಿ ಮೊತ್ತವನ್ನು ಡಿ.ಡಿ. ಮುಖಾಂತರ ಹರಾಜು ಕೂಗುವುದಕ್ಕೆ ಮೊದಲು ಈ ಕಛೇರಿಗೆ ಜಮಾ ಮಾಡಬೇಕು. ಟೆಂಡರ್ ಜೊತೆಯಲ್ಲಿ ಇಎಂಡಿ ಇಲ್ಲದಿದ್ದಲ್ಲಿ ಅಂತಹ ಟೆಂಡರನ್ನು ತಿರಸ್ಕರಿಸಲಾಗುವುದು.
3. ಈ ವಿಭಾಗದಲ್ಲಿ 2004-05ನೇ ಸಾಲಿಗೆ ನೋಂದಾಯಿಸಿದ ಅರಣ್ಯ ಗುತ್ತಿಗೆದಾರರು ಮಾತ್ರ ಈ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ.

4. ಸರ್ಕಾರಕ್ಕೆ ಬಾಕಿ ಕಟ್ಟದೆ ಇರುವ ಗುತ್ತಿಗೆದಾರರು ಈ ಹರಾಜಿನಲ್ಲಿ ಭಾಗವಹಿಸುವಂತಿಲ್ಲ ಇದಕ್ಕೆ ತಪ್ಪಿ ಭಾಗವಹಿಸಿದ್ದಲ್ಲಿ ಅವರ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
5. ಜಯಶೀಲರಾದ ಗುತ್ತಿಗೆದಾರರು ಸದರಿ ಹರಾಜಿನ ಗುತ್ತಿಗೆಗೆ ಸಂಬಂಧಿಸಿದಂತೆ ಮೊಬಲಗಿನ ಅರ್ಧ ಭಾಗ ಹಣ ಮತ್ತು ಚಾಲ್ತಿಯಲ್ಲಿರುವ ಪೂರ್ಣ ತೆರಿಗೆಗಳನ್ನು ಹರಾಜಿನ ದಿವಸವೇ ಜಮಾ ಮಾಡತಕ್ಕದ್ದು. ಉಳಿದ ಅರ್ಧ ಭಾಗ ಹಣವನ್ನು ಗುತ್ತಿಗೆ ಕರಾರು ಒಪ್ಪಂದ ಮಾಡಿಕೊಳ್ಳುವ ಮೊದಲು ಪಾವತಿಸತಕ್ಕದ್ದು.
6. ಟೆಂಡರ್ ಫಾರಂನ್ನು ನಿಗದಿತ ಇಎಂಡಿ ಯೊಂದಿಗೆ ಮೊಹರು ಮಾಡಿದ ಲಕೋಟೆಯಲ್ಲಿ 4.00 ಗಂಟೆಯೊಳಗಾಗಿ ಈ ಕಛೇರಿಯಲ್ಲಿನ ಟೆಂಡರ್ ಪೆಟ್ಟಿಗೆಯಲ್ಲಿ ಹಾಕುವುದು. ಸಂಬಂಧಿಸಿದಂತೆ ಹೆಚ್ಚಿನ ವಿವರಗಳನ್ನು ಈ ಕಛೇರಿ ಕೆಲಸದ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದಾಗಿದೆ.

ಪಿ.ಆರ್. 402 ಉಪ ಅರಣ್ಯ ಸಂರಕ್ಷಣಾಧಿಕಾರಿ, ದಾವಣಗೆರೆ ವಿಭಾಗ, ದಾವಣಗೆರೆ.

## ಕರ್ನಾಟಕ ಲೋಕಸೇವಾ ಆಯೋಗ

## ಲೋಕಸೇವಾ ಆಯೋಗದ ಕಛೇರಿ, "ಪಾರ್ಕ್ ಹೌಸ್", ಬೆಂಗಳೂರು

**ತಿದ್ದುಪಡಿ ಸಂಖ್ಯೆ: ಇಪ(2)920/2004-05/ಪಿಎಸ್‌ಸಿ, ದಿನಾಂಕ: 20ನೇ ಆಗಸ್ಟ್ 2004**

2003ರ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಸಂಬಂಧಿಸಿದ ಅಂಕಗಳ ಮರು ಎಣಿಕೆಗಾಗಿ ಕೆಲವೊಂದು ಅಭ್ಯರ್ಥಿಗಳಿಂದ ಬಂದಿದ್ದ ಕೋರಿಕೆಯಂತೆ ಮರು ಎಣಿಕೆಯ ನಂತರ ಗಳಿಸಿದ್ದ ಅಂಕಗಳಲ್ಲಿ ಕಂಡುಬಂದ ಬದಲಾವಣೆಗನುಸಾರವಾಗಿ ಕೆಳಕಂಡ ಫಲಿತಾಂಶವನ್ನು ಪ್ರಕಟಿಸಲಾಗಿದೆ:

**ಪರಿಶಿಷ್ಟ-ಎ**

| ಕ್ರ.ಸಂ. | ನೋಂದಣಿ ಸಂಖ್ಯೆ | ವಿಷಯ | ಕೇಂದ್ರ | ತೇರ್ಗಡೆ ದರ್ಜೆ |
|---|---|---|---|---|
| 1 | 35208 | ಎಸ್.ಎ.ಎಸ್. ಭಾಗ-3 | ಬೆಂಗಳೂರು | ಸಾಮಾನ್ಯ |
| 2 | 36741 | ಅಕೌಂಟ್ಸ್ ಹೈಯರ್ | ಬೆಂಗಳೂರು | ಸಾಮಾನ್ಯ |
| 3 | 45094 | ಪಿ.ಡಬ್ಲ್ಯೂ.ಡಿ. ಹೈಯರ್ ಭಾಗ-2 | ಬಾಗಲಕೋಟೆ | ಸಾಮಾನ್ಯ |
| 4 | 51259 | ಜನರಲ್ ಲಾ ಭಾಗ-1 | ದಾವಣಗೆರೆ | ಸಾಮಾನ್ಯ |
| 5 | 35527 | ಎಸ್.ಎ.ಎಸ್. ಭಾಗ-3 | ಬೆಂಗಳೂರು | ಸಾಮಾನ್ಯ |

**ಪರಿಶಿಷ್ಟ-ಬಿ**

| ಕ್ರ.ಸಂ. | ನೋಂದಣಿ ಸಂಖ್ಯೆ | ವಿಷಯ | ಪತ್ರಿಕೆ | ಕೇಂದ್ರ |
|---|---|---|---|---|
| 1 | 51192 | ಲೇಬರ್ | ಪತ್ರಿಕೆ-2 | ದಾವಣಗೆರೆ |
| 2 | 51205 | ಜನರಲ್ ಲಾ ಭಾಗ-1 | ಪತ್ರಿಕೆ-1 | ದಾವಣಗೆರೆ |

ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು,
ಪಿ.ಆರ್. 403 ಕರ್ನಾಟಕ ಲೋಕಸೇವಾ ಆಯೋಗ.

## ಉಪ ನಿರ್ದೇಶಕರು (ತರಬೇತಿ) ರವರ ಕಛೇರಿ, ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟ, ಬೆಂಗಳೂರು-88

## ಹರಾಜು ಇಸ್ತಿಹಾರ್

**ಸಂಖ್ಯೆ: ರಾಜಾಸಂತಕೇರಿ:ಉಗ್ರಾಣ:ಹರಾಜು:2004-05, ದಿನಾಂಕ: 18ನೇ ಆಗಸ್ಟ್ 2004**

**ವಿಷಯ:** ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟ, ಬೆಂಗಳೂರು-88 ರಲ್ಲಿರುವ ವಿವಿಧ ತಳಿಯ ರಾಸುಗಳನ್ನು ಹರಾಜು ಮಾಡುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ಪ್ರಚಾರ ಪಡಿಸುವುದೇನೆಂದರೆ, ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟಕ್ಕೆ ಸೇರಿದ ಈ ಕೆಳಗೆ ಸೂಚಿಸಿದ ವಿವಿಧ ತಳಿಗಳ ರಾಸುಗಳನ್ನು ದಿನಾಂಕ: 15.09.2004 ರಂದು 11 ಘಂಟೆಗೆ ಕೇಂದ್ರದ ಆವರಣದಲ್ಲಿ ಕೆಳಕಂಡ ನಿಬಂಧನೆಗೆ ಅನುಗುಣವಾಗಿ ಹರಾಜು ಮಾಡಲಾಗುವುದು.

**ಗುರುತಿನ ಸಂಖ್ಯೆ:**

1) ಆರ್.ಡಿ.ಆರ್.ಎಸ್ : 73, 60, 90, 76, 82 - (ಒಟ್ಟು - 5)
2) ಜೆರ್ಸಿ : 94, 102, 111, 116, 111, 130 - (ಒಟ್ಟು - 6)
3) ಸಿ.ಬಿ. : 11, ಗಂಡುಕರು (ಒಟ್ಟು - 1)

**ನಿಬಂಧನೆಗಳು:**

ಈ ಮೇಲೆ ತಿಳಿಸಿದ ರಾಸುಗಳನ್ನು ಪ್ರತ್ಯೇಕವಾಗಿ ಹರಾಜಿಗೆ ಇಡಲಾಗುವುದು:

1. ಹರಾಜಿನಲ್ಲಿ ಭಾಗವಹಿಸತಕ್ಕವರು ಹರಾಜಿನ ಮೊದಲು ರೂ.1000-00 ಗಳನ್ನು ಠೇವಣಿ ಇಡಬೇಕು. ಈ ಹಣವನ್ನು ಹರಾಜು ಪೂರೈಸಿದ ನಂತರ ಹಿಂತಿರುಗಿಸಲಾಗುವುದು. (ಅಂಗೀಕರಿಸಿದ ಹರಾಜುದಾರರನ್ನು ಹೊರತುಪಡಿಸಿ)

2. ಯಶಸ್ವಿ ಹರಾಜುದಾರರು ಹರಾಜಿನ ಪೂರ್ತಿ ಹಣವನ್ನು ತೆರಿಗೆ ಸಹಿತ ತಕ್ಷಣವೇ ಪಾವತಿ ಮಾಡಿ ರಶೀದಿ ಪಡೆಯತಕ್ಕದ್ದು ತಪ್ಪಿದಲ್ಲಿ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ನಷ್ಟದ ಮೊಬಲಗನ್ನು ಮೊದಲನೇ ಯಶಸ್ವಿ ಹರಾಜುದಾರರಿಂದಲೇ ರೆವಿನ್ಯೂ ಬಾಕಿ ಎಂದು ಪರಿಗಣಿಸಿ ವಸೂಲು ಮಾಡಲಾಗುವುದು. ಲಾಭವೇನಾದರೂ ಬಂದರೆ ಅದಕ್ಕೆ ಅವರು ಅರ್ಹರಲ್ಲ.
3. ಹರಾಜಿನಲ್ಲಿ ಖರೀದಿಸಿದ ರಾಸುಗಳನ್ನು ಅವರೇ ಸ್ವಂತ ಖರ್ಚಿನಿಂದ ಈ ಕ್ಷೇತ್ರದಿಂದ ಹರಾಜಾದ ಕೂಡಲೇ ತೆಗೆದುಕೊಂಡು ಹೋಗತಕ್ಕದ್ದು ಈ ಬಗ್ಗೆ ಯಾವ ವಿಧವಾದ ದೂರುಗಳನ್ನು ಸ್ವೀಕರಿಸಲಾಗುವುದಿಲ್ಲ.
4. ಈ ಹರಾಜಿನಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರದ ನೌಕರರು ಭಾಗವಹಿಸುವಂತಿಲ್ಲ.
5. ಹರಾಜನ್ನು ನಡೆಸುವ ಅಥವಾ ರದ್ದುಪಡಿಸುವ ಹಕ್ಕು ಹರಾಜು ಮಾಡುವ ಅಧಿಕಾರಿಗಳಿಗೆ ಸೇರಿರುತ್ತದೆ.
6. ಹರಾಜಾದ ರಾಸುಗಳನ್ನು ತೆಗೆದುಕೊಂಡು ಹೋಗಲು ಬೇಕಾಗುವ ಹಗ್ಗ ಮೂಗುದಾರ ಇತ್ಯಾದಿಗಳನ್ನು ಹರಾಜುದಾರರೇ ತರತಕ್ಕದ್ದು. ಈ ಕೇಂದ್ರದಿಂದ ಒದಗಿಸಲಾಗುವುದಿಲ್ಲ.
7. ಹೆಚ್ಚಿನ ಮಾಹಿತಿಗಾಗಿ ಉಪನಿರ್ದೇಶಕರು (ತರಬೇತಿ) ರಾಜ್ಯ ಜಾನುವಾರು ಸಂವರ್ಧನಾ ಮತ್ತು ತರಬೇತಿ ಕೇಂದ್ರ, ಹೆಸರಘಟ್ಟ, ಬೆಂಗಳೂರು - 88 ರವರ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.
8. ಹರಾಜಿನ ಸಮಯದಲ್ಲಿ ಸರ್ಕಾರದ ಚಾಲ್ತಿಯಲ್ಲಿರುವ ತೆರಿಗೆಗಳನ್ನು ಯಶಸ್ವಿ ಬಿಡ್ಡುದಾರರು ಪಾವತಿಸಬೇಕಾಗುತ್ತದೆ.

ಉಪನಿರ್ದೇಶಕರು (ತರಬೇತಿ), ರಾಜ್ಯ ಜಾನುವಾರು ಸಂವರ್ಧನಾ
ಮತ್ತು ತರಬೇತಿ ಕೇಂದ್ರ, ಹೆಸರಘಟ್ಟ, ಬೆಂಗಳೂರು.

ಪಿ.ಆರ್. 405

**ಅರಣ್ಯ ಇಲಾಖೆ**

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಕಾರ್ಯ ಯೋಜನೆ ವಿಭಾಗ, ಶಿವಮೊಗ್ಗ**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಸಂಖ್ಯೆ: ಎ2.ಜಿ.ಐ.ಪ್ಲೇಟ್.ವಿವ.2/2004-05, ದಿನಾಂಕ: 19ನೇ ಆಗಸ್ಟ್ 2004**

2004-05ನೇ ಸಾಲಿಗೆ ಈ ವಿಭಾಗಕ್ಕೆ ಬೇಕಾದ "ಸಂಖ್ಯೆಗಳನ್ನು ಕೊರೆದ ಜಿ.ಐ. ಪ್ಲೇಟ್‌ಗಳನ್ನು" ಸರಬರಾಜು ಮಾಡುವ ಬಗ್ಗೆ ಮೊಹರಾದ ಟೆಂಡರನ್ನು ನೋಂದಾಯಿಸಿದ ಗುತ್ತಿಗೆದಾರರಿಂದ ಕರೆಯಲಾಗಿದೆ. ಜಿ.ಐ. ಪ್ಲೇಟ್‌ನಲ್ಲಿ ಸಂಖ್ಯೆಗಳನ್ನು ಕತ್ತರಿಸಬೇಕಾದ ವಿವರವಾದ ಪಟ್ಟಿಯನ್ನು ಈ ಕಛೇರಿಯ ವಿವರವಾದ ಟೆಂಡರ್ ಅಧಿಸೂಚನೆಯಲ್ಲಿ ನಮೂದಿಸಲಾಗಿದೆ. ಈ ಕೆಳಗೆ ಸಹಿ ಮಾಡಿರುವವರು ಅಥವಾ ಅಧಿಕೃತ ಅಧಿಕಾರಿಗಳು ದಿನಾಂಕ: 20.9.2004ರ ಸಂಜೆ 4.00 ಗಂಟೆಯವರೆಗೆ ಸ್ವೀಕರಿಸುವರು.

| ವಿವರ | ಅಳತೆ | ಪ್ರಮಾಣ (ಅಂದಾಜು) | ಇ.ಎಂ.ಡಿ. | ಟೆಂಡರ್ ಅಂದಾಜು ಮೊತ್ತ |
|---|---|---|---|---|
| ನಿಗದಿತ ಬ್ಲಾಕ್ ಮತ್ತು ಕಂಪಾರ್ಟ್‌ಮೆಂಟ್ ಸಂಖ್ಯೆಗಳನ್ನು ಕೊರೆದ ಜಿ.ಐ. ಪ್ಲೇಟ್‌ಗಳನ್ನು ತಯಾರಿಸಿ ಸರಬರಾಜು ಮಾಡುವುದು. | 12" x 4" (22 ಗೇಜ್) | 3200 ಸಂಖ್ಯೆ | 5600 | 112000 |

**ಷರತ್ತುಗಳು**

1) ಮೊಹರಾದ ಟೆಂಡರ್‌ನ್ನು ಸ್ವೀಕರಿಸಿದ ದಿನಾಂಕ: 20.9.2004ರ ಸಂಜೆ 4.00 ಗಂಟೆಯ ನಂತರ ಹಾಜರು ಇರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.
2) ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛೆವುಳ್ಳ ಗುತ್ತಿಗೆದಾರರು ನಿಗದಿತ ಶುಲ್ಕ ರೂ.30-00 ಮತ್ತು ಇತರೆ ತೆರಿಗೆಗಳನ್ನು ಪಾವತಿ ಮಾಡಿ ಹೆಸರನ್ನು ನೋಂದಾಯಿಸಲು ದಿನಾಂಕ: 20.9.2004 ಮಧ್ಯಾಹ್ನ 12.00 ಗಂಟೆಯವರೆಗೆ ಕಾಲಾವಕಾಶ ನೀಡಲಾಗಿದೆ.
3) ನಿಗದಿತ ಟೆಂಡರ್ ನಮೂನೆಯಲ್ಲಿ ಗುತ್ತಿಗೆದಾರರು ಅತಿ ಕಡಿಮೆ ದರ "ಸಂಖ್ಯೆ" ಕತ್ತರಿಸಿದ ಒಂದು ಜಿ.ಐ.ಪ್ಲೇಟಿಗೆ ಎಂದು ನಮೂದಿಸಿ ಟೆಂಡರ್ ನೀಡತಕ್ಕದ್ದು.
4) ನಿಗದಿತ ಟೆಂಡರ್ ನಮೂನೆಯನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ಇದಕ್ಕೆ ತಗಲುವ ಶುಲ್ಕ ರೂ.10.00 ಮತ್ತು ಇತರೆ ತೆರಿಗೆಗಳನ್ನು ದಿನಾಂಕ: 20.9.2004 ರಂದು ಮಧ್ಯಾಹ್ನ 1.30 ರವರೆಗೆ ನಿಗದಿಗೊಳಿಸಲಾಗಿದೆ.
5) ಗುತ್ತಿಗೆ ಅವಧಿ 31.12.2004 ರವರೆಗೆ.
6) ಅಧಿಸೂಚನೆಯಲ್ಲಿ ಕಾಣಿಸಿದ ಪ್ರಮಾಣ ಅಂದಾಜು ಪ್ರಾಯಶಃ ಶೇಕಡ 20 ರಷ್ಟು ವ್ಯತ್ಯಾಸ ಆಗಬಹುದು.
7) ಭಾಗವಹಿಸಲು ಇಚ್ಛಿಸುವ ಗುತ್ತಿಗೆದಾರರು ಟೆಂಡರ್ ದಿನಾಂಕದಂದು ಅಥವಾ ಅದಕ್ಕಿಂತ ಮೊದಲು ಮಾದರಿ ಜಿ.ಐ.ಪ್ಲೇಟನ್ನು ಕೆಳಗೆ ಸಹಿ ಮಾಡಿರುವವರಲ್ಲಿ ಹಾಜರುಪಡಿಸುವುದು.
8) ಹೆಚ್ಚಿನ ಮಾಹಿತಿ ಬೇಕಾದಲ್ಲಿ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

ಪಿ.ಆರ್. 406 ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರ್ಯಯೋಜನೆ ವಿಭಾಗ, ಶಿವಮೊಗ್ಗ.

**P.N. MAYOHALL**

**IN THE COURT OF THE IV ADDL. CITY CIVIL JUDGE, MAYOHALL, BANGALORE**

**G & W.C.NO.15003/2004**

**PETITIONER:** 1) Mr. G. ALTAF HUSSAIN S/o Mr. H. Mohammed Ismail, Aged about 66 years,
2) Mrs. Tajunnissa W/o Mr. G. Altaf Hussain, Aged about 58 years.
Both are Residing at No.92/18, Baroda Bank Colony, Puttenahalli, J.P. Nagar 7th Phase Bangalore-78.

V/S

**RESPONDENT:** Nil

**PUBLIC NOTICE**

Notice is hereby given that a petition have been made to this court under Section 50-64 of the Indian Mental Health Act 1987, for appointment of the petitioner as the Guardian to the (Mentally ill) **Mr. MOHAMMED RIZWAN SAFIR** S/o Mr. G. Altaf Hussain

The Court has fixed the date of hearing on 29.09.2004 of the said petition. All persons claiming to have any interest may come and see the proceedings before the appointment of the Petitioner as Guardian.

Given under my hand and the seal of the Court, this the 17th July, 2004.

By Order of the Court,
Asst. Registrar,
City Civil Court, Mayohall unit, Bangalore.

PD-79

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಕಾರ್ಯ ಯೋಜನೆ ವಿಭಾಗ, ಶಿವಮೊಗ್ಗ**

**ಸಂಕ್ಷಿಪ್ತ ಟೆಂಡರ್ ಪ್ರಕಟಣೆ**

**ಸಂಖ್ಯೆ: ಎ2.ಕಾ.ಯೋ.ಶಿ.ಜೆ.ಬಿ.ಐ.ಸಿ.ಕಲ್ಲುಕಂಬ.ವಿ.ವ.3:2004-05, ದಿನಾಂಕ: 21ನೇ ಆಗಸ್ಟ್ 2004**

**ವಿಷಯ:** 2004-05ನೇ ಸಾಲಿನಲ್ಲಿ ಭದ್ರಾವತಿ ವಿಭಾಗದಲ್ಲಿನ ಎಂಎಫ್. ಎಸ್‌ಎಫ್. ಪ್ರದೇಶಗಳಲ್ಲಿ ಮೋಜಣಿ ಮಾಡಿದ ಸೀಮಾರೇಖೆ ಉದ್ದಕ್ಕೂ ನೆಡಲು ಬೇಕಾದ ಕಲ್ಲುಕಂಬ ಚಪ್ಪಡಿಗಳನ್ನು ಸರಬರಾಜು ಮಾಡಲು ಹಾಗೂ ಅವುಗಳನ್ನು ನೆಟ್ಟು ಕೊಡುವ ಬಗ್ಗೆ ಸಂಕ್ಷಿಪ್ತ ಟೆಂಡರ್ ಪ್ರಕಟಣೆ.

**ಉಲ್ಲೇಖ:** ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾರ್ಯ ಯೋಜನೆ, ಅರಣ್ಯ ಸಂಶೋಧನೆ ಮತ್ತು ತರಬೇತಿ ಬೆಂಗಳೂರು ಇವರ ಕಛೇರಿ ಪತ್ರ ಸಂಖ್ಯೆ: ಎ1.ಬಿಯುಡಿ.ಜೆ.ಬಿ.ಐ.ಸಿ. ಸಿಆರ್.30/04-05, ದಿನಾಂಕ: 12.7.2004.

ಭದ್ರಾವತಿ ವಿಭಾಗದ ಎಂಎಫ್. ಎಸ್‌ಎಫ್. ಪ್ರದೇಶಗಳಲ್ಲಿ ಮೋಜಣಿ ಮಾಡಿದ ಸೀಮಾರೇಖೆಗಳಲ್ಲಿ ಉತ್ತಮ ಗುಣಮಟ್ಟದ ಸುಟ್ಟ (ಸಿಂಗಲ್ ಲೈನ್ ಡ್ರೆಸ್ಡ್ ಗ್ರಾನೈಟ್ ಕಲ್ಲು) ಚೆನ್ನಾಗಿ ಕೆತ್ತಿದ 145 ಸೆಂ.ಮೀ. ಎತ್ತರ, 20 ಸೆಂ.ಮೀ. ಅಗಲ ಹಾಗೂ 15 ಸೆಂ.ಮೀ. ದಪ್ಪ ಹಾಗೂ ಅರ್ಧಚಂದ್ರ ವರ್ತುಲಾಕಾರದ ಕಲ್ಲು ಕಂಬಗಳನ್ನು ಸರಬರಾಜು ಮಾಡುವುದು, ಹಾಗೂ 60 ಸೆಂ.ಮೀ, 20 ಸೆಂ.ಮೀ, 25 ಸೆಂ.ಮೀ, ಅಳತೆಯ ಗುಂಡಿಗಳನ್ನು ತೋಡಿ, ಸದರಿ ಕಲ್ಲು ಕಂಬಗಳನ್ನು ನೆಡಲು ಈ ಕೆಳಗಿನ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರಮಾಣದಲ್ಲಿ ಸರಬರಾಜು ಮಾಡಿ ನೆಡಲು ಟೆಂಡರ್ ಎಂದು ಬರೆಯಲಾದ ಹಾಗೂ ಮೊಹರಾದ ಮತ್ತು ಸಹಿ ಮಾಡಲಾದ ಟೆಂಡರ್‌ಗಳನ್ನು ನೋಂದಾಯಿಸಲ್ಪಟ್ಟ ಗುತ್ತಿಗೆದಾರರಿಂದ ಆಹ್ವಾನಿಸಿದೆ. ಈ ಮೇಲ್ಕಂಡ ಷರತ್ತುಗಳನ್ನು ಪೂರೈಸಿದ್ದಲ್ಲಿ ಟೆಂಡರ್‌ಗಳನ್ನು ದಿನಾಂಕ: 20.09.2004ರ ಅಪರಾಹ್ನ 4 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾರ್ಯ ಯೋಜನೆ ವಿಭಾಗ, ಶಿವಮೊಗ್ಗ ಅಥವಾ ಅವರಿಂದ ಅಧಿಕಾರಿಯುತವಾಗಿ ನಿಯೋಜಿಸಲ್ಪಟ್ಟ ಅಧಿಕಾರಿಯವರಿಂದ ಈ ಕಛೇರಿಯಲ್ಲಿ ಸ್ವೀಕರಿಸಲಾಗುವುದು.

**ಷೆಡ್ಯೂಲ್**

| ಯುನಿಟ್ ಸಂಖ್ಯೆ | ಕಾಮಗಾರಿಗಳ ವಿವರ | ಆರ್.ಎಫ್ ಕಲ್ಲು ಕಂಬಗಳ ಸಂಖ್ಯೆ (ಅಂದಾಜು) | ಅಂದಾಜು ಮೊತ್ತ ರೂ.ಗಳಲ್ಲಿ | ಇ.ಎಂ.ಡಿ. ರೂ.ಗಳಲ್ಲಿ |
|---|---|---|---|---|
| 1 | 2 | 3 | 4 | 5 |
| 1 | ಭದ್ರಾವತಿ ವಿಭಾಗದ ಎಂಎಫ್. ಎಸ್‌ಎಫ್ ಪ್ರದೇಶಗಳಲ್ಲಿ ಮೋಜಣಿ ಮಾಡಿದ ಪ್ರದೇಶಗಳಲ್ಲಿ ಅಗತ್ಯ ಇರುವ ಕಡೆ ಮತ್ತು ವಲಯ ಅರಣ್ಯಾಧಿಕಾರಿಗಳು ಸೂಚಿಸಿದ ಸ್ಥಳಗಳಿಗೆ 145 ಸೆಂ.ಮೀ. ಎತ್ತರ, 20 ಸೆಂ.ಮೀ. ಅಗಲ ಹಾಗೂ 15 ಸೆಂ.ಮೀ. ದಪ್ಪ ಹಾಗೂ ತುದಿಯಲ್ಲಿ ವರ್ತುಲಾಕಾರದ ಉತ್ತಮ ಗುಣಮಟ್ಟದ ಸುಟ್ಟ ಸಿಂಗಲ್ ಲೈನ್ ಡ್ರೆಸ್ ಮಾಡಿದ ಕಲ್ಲುಕಂಬಗಳನ್ನು ಸ್ಟೋನ್ ಕ್ವಾರಿಗಳಿಂದ ತಯಾರಿಸಿ ಸರಬರಾಜು ಮಾಡುವುದರ ಬಗ್ಗೆ. | 1716 ಆರ್‌ಎಫ್. ಕಲ್ಲುಕಂಬಗಳು | 252252-00 | 12615-00 |

| 1 | 2 | 3 | 4 | 5 |
|---|---|---|---|---|
| 2 | ಭದ್ರಾವತಿ ವಿಭಾಗದ ಎಂಎಫ್. ಎಸ್‌ಎಫ್. ಪ್ರದೇಶಗಳಲ್ಲಿ ಮೋಜಣಿ ಮಾಡಿದ ಪ್ರದೇಶಗಳಲ್ಲಿ ಕಲ್ಲು ಕಂಬಗಳನ್ನು ಡಂಪಿಗ್ ಸ್ಥಳದಿಂದ ಡಿ-ಲೈನಿನ ನೆಡಬೇಕಾದ ಸ್ಥಳಕ್ಕೆ ಸಾಗಾಣಿಕೆ ಮಾಡಿ 60 ಸೆಂ.ಮೀ., 20 ಸೆಂ.ಮೀ. ಮತ್ತು 25 ಸೆಂ.ಮೀ. ಅಳತೆಯ ಗುಂಡಿಗಳನ್ನು ತೋಡಿ ಕಲ್ಲು ಕಂಬಗಳ ಮೇಲೆ 5 ಮಿ.ಮೀ ಆಳವಾಗಿ ನಿಗದಿಪಡಿಸಿದ ಅಕ್ಷರಗಳನ್ನು (ಆರ್‌ಎಫ್) ಬಾಣದ ಗುರುತು ಮತ್ತು ಅನುಕ್ರಮ ಸಂಖ್ಯೆಯನ್ನು ಕೊರೆದು ಹಸಿರು ಬಣ್ಣದಿಂದ ಅಕ್ಷರಗಳನ್ನು ಪೇಯಿಂಟ್ ಮಾಡಿ ನೆಟ್ಟು ಕೊಡುವುದರ ಬಗ್ಗೆ (ಬಾಣದ ಗುರುತು ಮುಂದಿನ ಸ್ಟೇಷನನ್ನು ತೋರಿಸುವಂತೆ ಇರಬೇಕು). | 1716 ಆರ್‌ಎಫ್. ಕಲ್ಲು ಕಂಬಗಳು | 348348-00 | 17420-00 |

**ಷರತ್ತುಗಳು**

1) ಕಲ್ಲು ಕಂಬಗಳ ಸರಬರಾಜು ಮತ್ತು ನೆಡುವ ಪ್ರಮಾಣ ಅಂದಾಜಿನದ್ದಾಗಿರುತ್ತದೆ. ಟೆಂಡರ್‌ಗಳನ್ನು ಯೂನಿಟ್‌ವಾರು ಪ್ರತ್ಯೇಕವಾಗಿ ಮೊಹರು ಮಾಡಲಾದ ಲಕೋಟೆಯಲ್ಲಿ ಮಾತ್ರ ಸಲ್ಲಿಸಬೇಕು. ಪ್ರತಿ ಯೂನಿಟ್‌ಗಳಿಗೆ ಪ್ರತ್ಯೇಕವಾಗಿ ಟೆಂಡರ್ ದರವನ್ನು ಸೂಚಿಸತಕ್ಕದ್ದು. ಪ್ರತಿ ಟೆಂಡರ್‌ದಾರರು ಎಲ್ಲಾ ಯೂನಿಟ್‌ಗಳಿಗೆ ಕೂಡ ದರವನ್ನು ನಮೂದಿಸುವುದು. ಯಾವುದಾದರೂ ಯೂನಿಟ್ಟನ್ನು ಕೈಬಿಟ್ಟಿದ್ದಲ್ಲಿ ಆ ಟೆಂಡರನ್ನು ತಿರಸ್ಕರಿಸಲಾಗುವುದು.
2) ಮೇಲ್ಕಂಡ ಯೂನಿಟ್‌ಗಳಿಗೆ ಪ್ರತ್ಯೇಕವಾಗಿ ಇ.ಎಂ.ಡಿ. ಹಣವನ್ನು ರಾಷ್ಟ್ರೀಕೃತ ಬ್ಯಾಂಕುಗಳಿಂದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಕಾರ್ಯಯೋಜನೆ ವಿಭಾಗ, ಶಿವಮೊಗ್ಗ ಇವರ ಪರವಾಗಿ ಪಡೆದು ಟೆಂಡರುಗಳೊಂದಿಗೆ ಸಲ್ಲಿಸಬೇಕು.
3) ಕಲ್ಲು ಕಂಬಗಳನ್ನು ಸಂಬಂಧಪಟ್ಟ ವಲಯ ಅರಣ್ಯಾಧಿಕಾರಿಗಳು ಗೊತ್ತು ಪಡಿಸಿದ ಸ್ಥಳಗಳಿಗೆ ಸರಬರಾಜು ಮಾಡಿ ತೃಪ್ತಿಕರವಾಗಿ ನೆಟ್ಟ ನಂತರ ಮತ್ತು ಅನುದಾನ ಹಣದ ಲಭ್ಯತೆ ಮೇರೆಗೆ ಹಾಗೂ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರ ತಪಾಸಣೆ ನಂತರ ಹಣ ಪಾವತಿಸಲಾಗುವುದು.
4) ಕಾಮಗಾರಿಗಳ ನ್ಯೂನತೆಗಳನ್ನು ದುರಸ್ತಿಪಡಿಸುವ (ನಿರ್ವಹಣೆ ಮಾಡುವ) ಅವಧಿಯು, ಕಾಮಗಾರಿ ಪೂರ್ಣಗೊಂಡ ದಿನಾಂಕದಿಂದ ಒಂದು ವರ್ಷದವರೆಗೆ ಚಾಲ್ತಿಯಿರುತ್ತದೆ. ಈ ಅವಧಿಯಲ್ಲಿ ಕೈಗೊಂಡ ಕಾಮಗಾರಿಯಲ್ಲಿ ಯಾವುದೇ ನ್ಯೂನತೆಗಳು ಕಂಡು ಬಂದಲ್ಲಿ ಅವುಗಳನ್ನು ಗುತ್ತಿಗೆದಾರರೇ ಅವರ ಸ್ವಂತ ಖರ್ಚಿನಲ್ಲಿ ದುರಸ್ತಿಪಡಿಸತಕ್ಕದ್ದು. ಈ ಅವಧಿಯಲ್ಲಿ ದುರಸ್ತಿ ಕೆಲಸವನ್ನು ನಿರ್ವಹಿಸಲು ಗುತ್ತಿಗೆದಾರರು ವಿಫಲರಾದಲ್ಲಿ ಇಂತಹ ದುರಸ್ತಿ ಕೆಲಸವನ್ನು ಇಲಾಖಾ ಮುಖಾಂತರವೇ ನಿರ್ವಹಿಸಿ, ಈ ದುರಸ್ತಿ ವೆಚ್ಚವನ್ನು ಗುತ್ತಿಗೆದಾರರ ಭದ್ರತಾ ಠೇವಣಿಯಲ್ಲಿ ಖಟಾಯಿಸಲಾಗುವುದು. ಈ ಅವಧಿ ಮುಗಿದ ನಂತರ ಗುತ್ತಿಗೆದಾರರ ಉಳಿಕೆ ಭದ್ರತಾ ಠೇವಣಿಯನ್ನು ಹಿಂತಿರುಗಿಸಲು ಕ್ರಮ ಜರುಗಿಸಲಾಗುವುದು.
5) ಟೆಂಡರ್ ನಮೂನೆಗಳನ್ನು ದಿನಾಂಕ: 20.09.2004 ರಂದು ಮಧ್ಯಾಹ್ನ 1.30 ರವರೆಗೆ ಕಛೇರಿ ಕೆಲಸದ ವೇಳೆಯಲ್ಲಿ ನಿಗದಿತ ನಮೂನೆ ಬೆಲೆ ರೂ.10.00 ಮತ್ತಿತರ ತೆರಿಗೆಗಳೊಂದಿಗೆ ಪಾವತಿ ಮಾಡಿ ಕೆಳಸಹಿದಾರರಿಂದ ಪಡೆಯಬಹುದು.
6) ಟೆಂಡರ್ ಮಂಜೂರಾತಿ ತಿಳಿಸಿದ 7 ದಿನಗಳಲ್ಲಿ ಕಾರ್ಯ ಯೋಜನೆ ವಿಭಾಗ, ಶಿವಮೊಗ್ಗ ಇವರು ವಿಧಿಸುವ ಷರತ್ತುಗಳೊಂದಿಗೆ ನಿಗದಿಪಡಿಸಿರುವ ಭದ್ರತಾ ಠೇವಣಿ ಹಣ ಜಮಾದೊಂದಿಗೆ ಕರಾರು ನಾಮೆ ಮಾಡಿಕೊಳ್ಳಬೇಕು.
7) ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿಕೊಳ್ಳಲು ಇಚ್ಛಿಸುವವರು ದಿನಾಂಕ: 20.9.2004ರ ಮಧ್ಯಾಹ್ನ 12 ಗಂಟೆಯವರೆಗೆ ನಿಗದಿ ಮಾಡಿದ ಶುಲ್ಕ ಪಾವತಿಸಿ ನಿಗದಿತ ನಮೂನೆಗಳಲ್ಲಿ ಅರ್ಜಿ ಸಲ್ಲಿಸಿ ನೋಂದಾಯಿಸಿಕೊಳ್ಳಬೇಕು.
8) ಟೆಂಡರ್‌ನ್ನು ಸ್ವೀಕರಿಸಿದ ದಿನಾಂಕದಂದು 4 ಗಂಟೆಯ ನಂತರ ಟೆಂಡರ್‌ದಾರರ ಸಮ್ಮುಖದಲ್ಲಿ ಹಾಜರಿದ್ದ ಗುತ್ತಿಗೆದಾರರ ಸಮಕ್ಷಮ ತೆರೆಯಲಾಗುವುದು. ಒಂದು ವೇಳೆ ಸದರಿ ದಿನಾಂಕವನ್ನು ಸಾರ್ವಜನಿಕ ರಜಾದಿನವೆಂದು ಘೋಷಿಸಲ್ಪಟ್ಟಲ್ಲಿ ಮರುದಿನ ಟೆಂಡರನ್ನು ನಡೆಸಲಾಗುವುದು.
9) ಗುತ್ತಿಗೆ ಅವಧಿ ದಿನಾಂಕ: 28.2.2005 ರವರೆಗೆ ಇರುತ್ತದೆ. ನವೆಂಬರ್ 2004 ರವರೆಗೆ ಶೇಕಡ 30, ಡಿಸೆಂಬರ್ 2004 ರವರೆಗೆ ಶೇಕಡ 30, ಜನವರಿ 2005 ರವರೆಗೆ ಶೇಕಡ 30 ಹಾಗೂ ಫೆಬ್ರವರಿ 2005 ರವರೆಗೆ ಶೇಕಡ 10 ರಷ್ಟು ಕಾರ್ಯನಿರ್ವಹಿಸಿ ಕೊಡಬೇಕು.
10) ಟೆಂಡರನ್ನು ಯಾವುದೇ ಕಾರಣ ನೀಡದೆ ಮುಂದೂಡುವ ಹಾಗೂ ಬದಲಾವಣೆ ಮಾಡುವ ಸಂಪೂರ್ಣ ಅಧಿಕಾರ ಈ ಕೆಳಸಹಿದಾರರ ಅಧಿಕಾರದ ವ್ಯಾಪ್ತಿಗೆ ಒಳಪಟ್ಟಿರುತ್ತದೆ.
11) ಇನ್ನಿತರ ವಿವರ ಮತ್ತು ಕರಾರುಗಳನ್ನು ಕಛೇರಿಯಿಂದ ಕೆಲಸದ ದಿನಗಳ ಕಛೇರಿ ಸಮಯದಲ್ಲಿ ಪಡೆಯಬಹುದು. ಹಾಗೂ ವಿವರವಾದ ಪ್ರಕಟಣೆಯನ್ನು ಈ ಕಛೇರಿಯಿಂದ ಪಡೆಯಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಕಾರ್ಯಯೋಜನೆ ವಿಭಾಗ, ಶಿವಮೊಗ್ಗ.

ಪಿ.ಆರ್. 409

**ಕರ್ನಾಟಕ ಲೋಕ ಸೇವಾ ಆಯೋಗ**

**ಲೋಕ ಸೇವಾ ಆಯೋಗದ ಕಛೇರಿ, "ಪಾರ್ಕ್ ಹೌಸ್", ಬೆಂಗಳೂರು**

**ಅಧಿಸೂಚನೆ ಸಂಖ್ಯೆ: ಪಿಎಸ್‌ಸಿ 04 ಆರ್‌ಟಿಬಿ 97, ದಿನಾಂಕ: 26ನೇ ಆಗಸ್ಟ್ 2004**

ಕರ್ನಾಟಕ ಲೋಕ ಸೇವಾ ಆಯೋಗವು ತನ್ನ ಸಮ ಸಂಖ್ಯೆ ದಿನಾಂಕ: 05.04.2004ರ ಅಧಿಸೂಚನೆಯಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯ 21 ಸಹಾಯಕ ಶಸ್ತ್ರಚಿಕಿತ್ಸಕರ ಹುದ್ದೆಗಳಿಗೆ ಗ್ರಾಮೀಣ ಕೃಪಾಂಕ ರಹಿತ ಪರಿಷ್ಕೃತ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಿದ್ದು ಅದರ ಮುಖ್ಯ ಪಟ್ಟಿಯಲ್ಲಿನ ಕ್ರಮ ಸಂಖ್ಯೆ: 12 ರಲ್ಲಿ ಪ್ರವರ್ಗ 3(ಬಿ) ಮೀಸಲಾತಿಯಡಿ ಆಯ್ಕೆಯಾದ ಡಾ: ನಿಜಗುಣ ಎನ್. ರವರು ಕರ್ತವ್ಯಕ್ಕೆ ಹಾಜರಾಗದ ಪ್ರಯುಕ್ತ ಅವರ ಬದಲಿಗೆ ಪ್ರವರ್ಗ-3(ಬಿ) ಮೀಸಲಾತಿಯಡಿ ಇನ್ನೋರ್ವ ಅಭ್ಯರ್ಥಿ ಡಾ: ಸವಿತಾ ಎಂ.ಎಸ್, ಮನೆ ನಂ: 124, 'ಬಿ' ಬ್ಲಾಕ್, 23ನೇ ಮುಖ್ಯ ರಸ್ತೆ, ವಿಜಯನಗರ 3ನೇ ಹಂತ, ಮೈಸೂರು, ಇವರನ್ನು ಆಯ್ಕೆ ಮಾಡಿ ಅವರ ಸ್ಥಾನವನ್ನು ಮುಖ್ಯ ಪಟ್ಟಿಯ ಕ್ರಮ ಸಂಖ್ಯೆ: 19 ರಲ್ಲಿ ನಿಗದಿಪಡಿಸಲಾಗಿದೆ.

ಡಾ: ಸವಿತಾರವರ ಆಯ್ಕೆಯು ಮಾನ್ಯ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿರುವ ಮಹಿಳಾ ಮೀಸಲಾತಿ ಕುರಿತಂತೆ WA No: 232/99ರ ಹಾಗೂ ಮಾನ್ಯ ಉಚ್ಚ ನ್ಯಾಯಾಲಯದ WP No: 48613/2003ರ ಅಂತಿಮ ತೀರ್ಮಾನಕ್ಕೆ ಬದ್ಧವಾಗಿರುತ್ತದೆ.

**ಬಿ.ಎಸ್. ರಾಮಪ್ರಸಾದ್**

ಪಿ.ಆರ್. 411 **ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ.**

ತೋಟಗಾರಿಕೆ ಇಲಾಖೆ

ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು-4

ಟೆಂಡರ್ ಪ್ರಕಟಣೆ ಸಂ: ತೋಇ:ತೋಸಾಂಬೆ:ಸತೋಅ-2:16:04-05, ದಿನಾಂಕ : 23ನೇ ಆಗಸ್ಟ್ 2004

ವಿಷಯ : 2004-05 ನೇ ಸಾಲಿಗೆ ತೋಟಗಾರಿಕೆ ಇಲಾಖೆಗೆ ಸಮಗ್ರ ತೆಂಗು ಬೇಸಾಯ ಅಭಿವೃದ್ಧಿ ಯೋಜನೆ ಅಡಿ ಪ್ರಾತ್ಯಕ್ಷತೆ ತಾಕುಗಳ ಸ್ಥಾಪನೆ ಕಾರ್ಯಕ್ರಮದಡಿ ಬೇಕಾಗುವ ಪವರ್ ಸ್ಪ್ರೇಯರ್ ಸರಬರಾಜು ಮಾಡಲು ಟೆಂಡರ್ ಕರೆಯುವ ಬಗ್ಗೆ.

ಉಲ್ಲೇಖ: ಸರ್ಕಾರದ ಆದೇಶ ಸಂ:ಎಸಿಎನ್:ಡಿಸಿಡಿ:1530:2000, ದಿನಾಂಕ: 7-11-00.

2004-05 ನೇ ಸಾಲಿಗೆ ಸಮಗ್ರ ತೆಂಗು ಬೇಸಾಯ ಅಭಿವೃದ್ಧಿ ಯೋಜನೆ ಅಡಿ ಪ್ರಾತ್ಯಕ್ಷತೆ ತಾಕುಗಳ ಸ್ಥಾಪನೆ ಕಾರ್ಯಕ್ರಮದಡಿ ಬೇಕಾಗುವ ಪವರ್ ಸ್ಪ್ರೇಯರ್‌ಗಳನ್ನು ಸರಬರಾಜು ಮಾಡಲು ಸರಬರಾಜುದಾರರು ತಮ್ಮ ಅತೀ ಕಡಿಮೆ ದರಗಳನ್ನು ನಮೂದಿಸಿ ಮೊಹರಾದ ಟೆಂಡರ್ ಲಕೋಟೆಯನ್ನು ಪವರ್ ಸ್ಪ್ರೇಯರ್‌ಗಳ ಟೆಂಡರ್-2004-05, ಎಂದು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ರವರಿಗೆ ಕಳುಹಿಸತಕ್ಕದ್ದು. ಮೊಹರಾದ ಲಕೋಟೆಯ ಮೇಲೆ ಪವರ್ ಸ್ಪ್ರೇಯರ್‌ಗಳ ಪೂರೈಕೆಗೆ ಟೆಂಡರ್ 2004-05, ಎಂದು ನಮೂದಿಸತಕ್ಕದ್ದು. ಹೆಚ್ಚಿನ ಮಾಹಿತಿಯನ್ನು ತೋಟಗಾರಿಕೆ ಜಂಟಿ ನಿರ್ದೇಶಕರು, (ತೋಟದ ಬೆಳೆಗಳು), ಲಾಲ್‌ಬಾಗ್, ಬೆಂಗಳೂರು ರವರ ಕಛೇರಿಯಲ್ಲಿ (**ಫೋನ್** ನಂ: 26573790) ಬೆಳಿಗ್ಗೆ 10-00 ಗಂಟೆಯಿಂದ ಸಾಯಂಕಾಲ 5-00 ಗಂಟೆಯವರೆಗೆ ಪಡೆಯಬ ಹುದು (ಭಾನುವಾರ ಮತ್ತು ಇತರೆ ಸರ್ಕಾರಿ ರಜಾ ದಿನಗಳನ್ನು ಹೊರತು ಪಡಿಸಿ). ನಿಗದಿತ ಟೆಂಡರ್ ಫಾರಂಗಳನ್ನು ತೋಟಗಾರಿಕೆ ನಿರ್ದೇಶನಾಲಯದಲ್ಲಿ ರೂ.100-00 (ರೂ.ಒಂದು ನೂರು ಮಾತ್ರ) ಹಣ ನೀಡಿ ದಿನಾಂಕ: 07-09-2004 ರಿಂದ 24-09-2004 ರವರೆಗೆ ಕಛೇರಿ ವೇಳೆಯಲ್ಲಿ ಹಾಗೂ 25-09-2004 ರಂದು ಮಧ್ಯಾಹ್ನ 1-00 ಗಂಟೆಯವರೆಗೆ ಪಡೆಯಬ ಹುದಾಗಿದೆ. ನಿಗದಿತ ಟೆಂಡರ್ ಫಾರಂ ಅಲ್ಲದೆ ಇತರೆ ಯಾವುದೇ ರೀತಿಯಲ್ಲಿ ಟೆಂಡರ್ ಸಲ್ಲಿಸಿದರೆ, ತಿರಸ್ಕರಿಸಲಾಗುವುದು.

ಸರಬರಾಜುದಾರರು, ಸರಬರಾಜು ಮಾಡುವ ಪವರ್ ಸ್ಪ್ರೇಯರ್‌ಗಳ ಅತೀ ಕಡಿಮೆ ದರವನ್ನು ಟೆಂಡರ್ ಫಾರಂನಲ್ಲಿ ನಮೂದಿಸಿ ಇದರ ಜೊತೆ ರೂ. 25,000-00 (ರೂ.ಇಪ್ಪತ್ತೈದು ಸಾವಿರ ಮಾತ್ರ) ಗಳ ಭದ್ರತಾ ಠೇವಣಿ ಹಣವನ್ನು ಕ್ರಾಸ್ ಮಾಡಿರುವ ಬ್ಯಾಂಕ್ ಡ್ರಾಫ್ಟ್ ಮೂಲಕ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ದಿನಾಂಕ: 25-09-2004 ರಂದು ಮಧ್ಯಾಹ್ನ 3.00 ಗಂಟೆಯ ಒಳಗೆ ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು-4 ಇಲ್ಲಿಗೆ ಕಛೇರಿ ವೇಳೆಯಲ್ಲಿ ಅಂಚೆ ಮುಖಾಂತರ ಅಥವಾ ಮುದ್ದಾಂ ಮುಖಾಂತರ ತಲುಪಿಸಬೇಕು.

ಟೆಂಡರ್‌ಗಳನ್ನು ದಿನಾಂಕ: 25-09-2004 ರಂದು ಮಧ್ಯಾಹ್ನ 4.00 ಗಂಟೆಗೆ, ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು ಇಲ್ಲಿ ತೆರೆಯಲಾಗುವುದು. ಈ ಪ್ರಕ್ರಿಯೆಯಲ್ಲಿ ಟೆಂಡರ್ ಒಪ್ಪಿಗೆಯಾಗದವರ ಭದ್ರತಾ ಹಣವನ್ನು ಹಿಂತಿರುಗಿಸಲಾಗುವುದು. ಟೆಂಡರ್ ಒಪ್ಪಿಗೆಯಾದವರ ಭದ್ರತಾ ಠೇವಣಿ ಹಣವನ್ನು ಅವರ ಸ್ಪ್ರೇಯರ್‌ಗಳ ಸರಬರಾಜು ಪ್ರಕ್ರಿಯೆ ಪೂರ್ಣವಾದ ನಂತರ, ನಿಗದಿಪಡಿಸಿದ ಗುಣಮಟ್ಟ ಹಾಗೂ ಪ್ರಮಾಣದಲ್ಲಿ ಪವರ್ ಸ್ಪ್ರೇಯರ್‌ಗಳನ್ನು ಪಡೆದಿರುವ ಬಗ್ಗೆ ದೃಢೀಕರಣವನ್ನು ಸಂಬಂಧಪಟ್ಟ ಅಧಿಕಾರಿಗಳಿಂದ ಖಾತರಿ ಪಡೆದುಕೊಂಡ ಮೇಲೆ ಹಿಂತಿರುಗಿಸಲಾಗುವುದು. ಯಶಸ್ವಿಯಾದ ಟೆಂಡರ್‌ದಾರರ ಹೆಸರುಗಳನ್ನು ಎಲ್ಲಾ ಜಿಲ್ಲಾ ಅನುಷ್ಠಾನಾಧಿಕಾರಿಗಳಿಗೆ ಕಳುಹಿಸಿ ಕೊಡುವುದರಿಂದ ಅನುಮೋದಿತ ಟೆಂಡರ್‌ದಾರರು ಆಯಾ ಜಿಲ್ಲೆಯ ತೋಟಗಾರಿಕೆ ಉಪ ನಿರ್ದೇಶಕರು, (ಜಿಪಂ), ರವರಿಂದ ಬೇಡಿಕೆಗಳನ್ನು ಪಡೆದು ಸಾಗಾಣಿಕಾ ವೆಚ್ಚವನ್ನು ತಾವೆ ಭರಿಸಿಕೊಂಡು ತೋಟಗಾರಿಕೆ ಉಪ ನಿರ್ದೇಶಕರು (ಜಿಪಂ) ರವರು ಸೂಚಿಸುವ ಸ್ಥಳಕ್ಕೆ ಒಳ್ಳೆಯ ಗುಣಮಟ್ಟದ ಸ್ಪ್ರೇಯರ್‌ಗಳನ್ನು ಸರಬರಾಜು ಮಾಡಬೇಕು. ಕನಿಷ್ಠ ಟೆಂಡರ್ ದರವು ವಾಣಿಜ್ಯ ತೆರಿಗೆ ಹಾಗೂ ಸಾಗಾಣಿಕೆ ವೆಚ್ಚವನ್ನು ಒಳಗೊಂಡಿರಬೇಕು ಹಾಗೂ ಆಯಾ ಕ್ಷೇತ್ರಾಧಿಕಾರಿಗಳ ಸ್ಥಳಗಳಿಗೆ ಕಳುಹಿಸುವುದನ್ನು ಒಳಗೊಂಡಿರತಕ್ಕದ್ದು.

ಷರತ್ತುಗಳು:

1. ಟೆಂಡರ್ ಫಾರಂನ್ನು ಸಂಸ್ಥೆಯ ಮಾಲೀಕರು ಸಲ್ಲಿಸತಕ್ಕದ್ದು. ಇತರೆ ಅಧಿಕಾರಿಯು ಸಲ್ಲಿಸುವುದಾದರೆ, ಮಾಲೀಕರಿಂದ ಧೃಢೀಕರಣ ಪತ್ರದ ಮೂಲಪ್ರತಿ ಲಗತ್ತಿಸಬೇಕು.

2. ಸರಬರಾಜು ಮಾಡುವ ಕಂಪನಿ: ಸಂಸ್ಥೆಗಳು ರಿಜಿಸ್ಟರ್: ನೊಂದಾವಣೆ ಆಗಿರಬೇಕು (ಪ್ರತಿ ಲಗತ್ತಿಸಬೇಕು) ಹಾಗೂ ಟೆಂಡರ್‌ದಾರರು ಪರಿಕರಗಳಿಗೆ ತಮ್ಮ ಅತೀ ಕಡಿಮೆ ದರವನ್ನು ವಾಣಿಜ್ಯ ತೆರಿಗೆ ಹಾಗೂ ಸಾಗಾಣಿಕೆ ವೆಚ್ಚ ಸೇರಿದಂತೆ ನಮೂದಿಸಬೇಕು.
3. ಟೆಂಡರ್‌ದಾರರು ಕಳೆದ ವರ್ಷದ ಆದಾಯ/ವಾಣಿಜ್ಯ ತೆರಿಗೆ ದಾಖಲಾತಿಗಳನ್ನು ಟೆಂಡರ್ ಸಲ್ಲಿಸುವಾಗ ಒದಗಿಸಬೇಕು. (ಕೆ.ಎಸ್.ಟಿ, ಸಿ.ಎಸ್.ಟಿ ವಿವರಗಳು)
4. ಜಿಲ್ಲೆಯ/ ಅಧಿಕಾರಿಗಳಿಂದ ನೀಡಲಾಗುವ ಇಂಡೆಂಟ್ ಪ್ರಕಾರ ಒಳ್ಳೆಯ ಗುಣಮಟ್ಟದ ಪವರ್ ಸ್ಪ್ರೇಯರ್‌ಗಳನ್ನು ಸ್ಪೆಸಿಫಿಕೇಷನ್ ಪ್ರಕಾರ ಸರಬರಾಜು ಮಾಡತಕ್ಕದ್ದು.
5. ಸರಬರಾಜು ಮಾಡುವ ಪವರ್ ಸ್ಪ್ರೇಯರ್ ಲಗತ್ತಿಸಿರುವ ಅನುಬಂಧದಂತೆ ಗುಣಮಟ್ಟ / ಸ್ಪೆಸಿಫಿಕೇಷನ್ಸ್ ಹೊಂದಿರಬೇಕು.
6. ಟೆಂಡರ್ ಸಲ್ಲಿಸುವವರು ವಿಳಾಸವನ್ನು ಹಾಗೂ ಫೋನ್ ನಂಬರ್‌ನ್ನು ಟೆಂಡರ್‌ನಲ್ಲಿ ಸ್ಪಷ್ಟವಾಗಿ ನಮೂದಿಸಿರಬೇಕು.
7. ಸರಬರಾಜುದಾರರು ಪವರ್ ಸ್ಪ್ರೇಯರ್‌ನ ಸ್ವಂತ ಉತ್ಪಾದಕರಾಗಿರಬೇಕು/ ದೃಢೀಕೃತ ಡಿಸ್ಟ್ರಿಬ್ಯೂಟರ್‌ಗಳಾಗಿರಬೇಕು. ದೃಢೀಕೃತ ಡಿಸ್ಟ್ರಿಬ್ಯೂಟರ್ ಎಂಬುದಕ್ಕೆ ದೃಢೀಕರಿಸಿದ ದಾಖಲಾತಿಗಳನ್ನು (ಮೂಲ ಪ್ರತಿಯನ್ನು) ಲಗತ್ತಿಸಬೇಕು.
8. ಭದ್ರತಾ ಹಣವನ್ನು ಕ್ರಾಸ್ ಮಾಡಿದ ಡ್ರಾಫ್ಟ್ ರೂಪದಲ್ಲಿ ಮಾತ್ರ ಸಲ್ಲಿಸಬೇಕು. ಚೆಕ್ ಅಥವಾ ರಾಷ್ಟ್ರೀಯ ಉಳಿತಾಯ ಪತ್ರಗಳ ಮೂಲಕ ಸಲ್ಲಿಸಿದ್ದಲ್ಲಿ ಸ್ವೀಕರಿಸಲಾಗುವುದಿಲ್ಲ.
9. ಪವರ್‌ಸ್ಪ್ರೇಯರ್‌ಗಳ ಪ್ರಮಾಣವನ್ನು ನಮೂದಿಸಿರುವಷ್ಟು ಸಂಖ್ಯೆಗಳಲ್ಲಿ ಒದಗಿಸುವ ಸಾಮರ್ಥ್ಯವುಳ್ಳವರು ಮಾತ್ರ ಟೆಂಡರ್‌ನಲ್ಲಿ ಭಾಗವಹಿಸುವುದು.
10. ಯಶಸ್ವಿಯಾದ ಸರಬರಾಜುದಾರರ ವಿಳಾಸಗಳನ್ನು ರಾಜ್ಯದ ವಿವಿಧ ಜಿಲ್ಲೆಗಳ ತೋಟಗಾರಿಕೆ ಉಪ ನಿರ್ದೇಶಕರು (ಜಿಲ್ಲಾ ಪಂಚಾಯತ್) ಗಳಿಗೆ ಕಳುಹಿಸಿ ಕೊಡಲಾಗುವುದರಿಂದ ಬೇಡಿಕೆಗಳನ್ನು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದು ಆಯಾ ಜಿಲ್ಲೆಗಳಿಗೆ ಅವರು ಸೂಚಿಸುವ ಸ್ಥಳಗಳಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಅನುಷ್ಠಾನಾಧಿಕಾರಿಗಳು ತಿಳಿಸಿದ ದಿನಾಂಕದೊಳಗಾಗಿ ಸರಬರಾಜು ಮಾಡಲು ಸಿದ್ದರಿರಬೇಕು.
11. ಯಶಸ್ವಿಯಾದ ಯಾವುದೇ ಟೆಂಡರ್‌ದಾರರಿಗೆ ನಿರ್ದೇಶನಾಲಯದಿಂದ ನೇರವಾಗಿ ಪವರ್‌ಸ್ಪ್ರೇಯರ್‌ಗಳನ್ನು ಸರಬರಾಜು ಮಾಡಲು ಬೇಡಿಕೆ ನೀಡಲಾಗುವುದಿಲ್ಲ. ಬೇಡಿಕೆಗಳನ್ನು ಜಿಲ್ಲಾ ಮಟ್ಟದ /ತಾಲ್ಲೂಕು ಅಧಿಕಾರಿಗಳು ಮಾತ್ರ ನೀಡುವುದು. ಅನುಮೋದಿತ ಸರಬರಾಜುದಾರರಿಗೆ ಬೇಡಿಕೆಗಳನ್ನು ನೀಡುವುದು ಅಥವಾ ಬಿಡುವುದು ಆಯಾ ಜಿಲ್ಲೆಗಳ ಅನುಷ್ಠಾನಾಧಿಕಾರಿಗಳಿಗೆ ಸಂಬಂಧಿಸಿರುತ್ತದೆ. ಈ ಬಗ್ಗೆ ಯಾವುದೇ ದೂರುಗಳು ಬಂದಲ್ಲಿ ನಿರ್ದೇಶನಾಲಯವು ಸ್ವೀಕರಿಸುವುದಿಲ್ಲ.
12. ತೋಟಗಾರಿಕೆ ನಿರ್ದೇಶಕರು ಯಾವುದೇ ಕಾರಣ ನೀಡದೇ ಟೆಂಡರ್ ಅನ್ನು ರದ್ದುಗೊಳಿಸುವ ಹಕ್ಕು ಹೊಂದಿರುತ್ತಾರೆ.
13. ಟೆಂಡರ್ ಫಾರಂ ಬೆಲೆ ರೂ.100-00 (ರೂ. ಒಂದು ನೂರು ಮಾತ್ರ) ಅನ್ನು ನೀಡಿ ತೋಟಗಾರಿಕೆ ನಿರ್ದೇಶನಾಲಯದಿಂದ ಟೆಂಡರ್ ಫಾರಂ ಪಡೆಯತಕ್ಕದ್ದು.
14. ಪವರ್ ಸ್ಪ್ರೇಯರ್‌ಗೆ ಐ.ಎಸ್.ಐ/ಐ.ಎಸ್.ಓ ದೃಢೀಕರಣ ಇರಬೇಕು ಹಾಗೂ ಸಂಬಂಧಪಟ್ಟ ದೃಢೀಕರಣ ಪತ್ರವನ್ನು ಲಗತ್ತಿಸಬೇಕು.
15. ಪವರ್ ಸ್ಪ್ರೇಯರ್ ಗುಣಮಟ್ಟವನ್ನು ಪರೀಕ್ಷಿಸಿ ತೀರ್ಮಾನಿಸುವ ಪೂರ್ಣ ಅಧಿಕಾರ, ಇಲಾಖೆಯ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಈ ವಿಷಯದಲ್ಲಿ ಇಲಾಖೆಯ ನಿರ್ಧಾರ ಅಂತಿಮವಾಗಿರುತ್ತದೆ.
16. ತೋಟಗಾರಿಕೆ ನಿರ್ದೇಶಕರು ಯಾವುದೇ ಕಾರಣ ನೀಡದೆ, ಟೆಂಡರ್ ಅನ್ನು ಪುರಸ್ಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಹೊಂದಿರುತ್ತಾರೆ.
17. ಅನುಮೋದಿತ ಟೆಂಡರ್‌ದಾರರು ಮೇಲೆ ಹೇಳಿದ ನಿಬಂಧನೆಗಳನ್ನು ದೃಢೀಕರಿಸುತ್ತಾ, ಸರಬರಾಜುದಾರರು, ಕರಾರು ಒಪ್ಪಿಗೆ ಪತ್ರವನ್ನು ರೂ.20-00 ಬೆಲೆಯ ಛಾಪಾ ಕಾಗದದ ಮೇಲೆ ಬರೆದು ಸಹಿ ಮಾಡಿ ನಿರ್ದೇಶನಾಲಯದಿಂದ ಸೂಚಿಸುವ ದಿನಾಂಕದೊಳಗೆ ನೀಡತಕ್ಕದ್ದು.
18. ಅನುಮೋದಿತ ಟೆಂಡರ್‌ದಾರರು ಸರಬರಾಜು ಮೊತ್ತದ ಶೇಕಡ 5 ರಷ್ಟು ಮೊತ್ತವನ್ನು ಕ್ರಾಸ್ ಮಾಡಿದ ಡಿ.ಡಿ. ರೂಪದಲ್ಲಿ ಮುಂಗಡ ಭದ್ರತಾ ಠೇವಣಿಯನ್ನು, ತೋಟಗಾರಿಕೆ ನಿರ್ದೇಶಕರು, ರವರ ಹೆಸರಿನಲ್ಲಿ ನೀಡಬೇಕು.
19. ಟೆಂಡರ್‌ದಾರರು ಮೇಲಿನ ಯಾವುದೇ ಷರತ್ತುಗಳನ್ನು ಪಾಲಿಸದಿದ್ದಲ್ಲಿ ಅವರ ಇ.ಎಂ.ಡಿ. ಮೊತ್ತ ಹಾಗೂ ಮುಂಗಡ ಭದ್ರತಾ ಠೇವಣಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು.
20. ಯಾವುದೇ ಕಾನೂನು ಪರಿಹಾರಗಳಿಗೆ ಬೆಂಗಳೂರು ವ್ಯಾಪ್ತಿಯ ಕೋರ್ಟುಗಳಿಗೆ ಸೀಮಿತವಾಗಿರುತ್ತದೆ.

ಪಿ.ಆರ್. 408 ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು–4

ಉಪ ಅರಣ್ಯ ಸಂರಕ್ಷಣಾಧಿಕಾಧಿಕಾರಿಗಳ ಕಚೇರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು

ಟೆಂಡರ್ ಕಂ ಹರಾಜು ಪ್ರಕಟಣೆ

ಸಂಖ್ಯೆ: ಎ5-ಎಸ್‌ಎಎಸ್-ಸಿಆರ್-63/04-05 ದಿನಾಂಕ: 25ನೇ ಆಗಸ್ಟ್ 2004

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ, ಬೆಂಗಳೂರು ಗ್ರಾಮಾಂತರ ವಿಭಾಗದ ರಾಮನಗರ ಮತ್ತು ಕನಕಪುರ ರಸ್ತೆ ವಿಸ್ತರಣೆ ಮಾಡಲು ಕಾಮಗಾರಿಗೆ ಅಡ್ಡ ಬರುವ ಮರಗಳನ್ನು ಹರಾಜಿನ ಮೂಲಕ ವಿಲೇ ಮಾಡಲು ತೀರ್ಮಾನಿಸಲಾಗಿದ್ದು, ಈ ಕೆಳಕಾಣಿಸಿದ ಅನುಸೂಚಿಯ ದಿನಾಂಕದಂದು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಅಥವಾ ಅವರಿಂದ ನೇಮಿಸಲ್ಪಟ್ಟ ಅಧಿಕಾರಿಯಿಂದ ಬಹಿರಂಗ ಹರಾಜು ಮಾಡಲಾಗುವುದು.

| ಬ್ಲಾಕ್ ನಂ | ಹರಾಜು ನಡೆಯುವ ಸ್ಥಳ | ಹರಾಜಿನ ದಿನಾಂಕ ಮತ್ತು ವೇಳೆ | ಪ್ರಸ್ತುತ ಮರ ಇರುವ ಸ್ಥಳ ಹಾಗೂ ಮರಗಳ ಗುರುತಿನ ಸಂಖ್ಯೆ | ಮಾರಾಟಕ್ಕೆ ಇಡಲಾಗಿರುವ ಮರದ ಜಾತಿಯ ವಿವರ ಹಾಗೂ ಮರಗಳ ಸಂಖ್ಯೆ | ಹರಾಜಿಗೆ ಪ್ರಸ್ತಾಪಿಸಿದ ಮರಗಳಲ್ಲಿ ದೊರೆಯಬಹುದಾದ ಟಿಂಬರ್ ಮತ್ತು ಸೌದೆಯ ಅಂದಾಜು ಪ್ರಮಾಣ | |
|---|---|---|---|---|---|---|
| | | | | | ಟಿಂಬರ್ ಘ.ಮೀ | ಸೌದೆ ಕೆ.ಜಿ.ಗಳಲ್ಲಿ |
| ೧ | ೨ | ೩ | ೪ | ೫ | ೬ | ೭ |
| ೧ | ವಲಯ ಅರಣ್ಯಾಧಿಕಾರಿಗಳ ಕಛೇರಿ, ರಾಮನಗರ ವಲಯ, ರಾಮನಗರ. | ೨೪-೦೯-೨೦೦೪ ರಂದು ಬೆಳಿಗ್ಗೆ ೧೧.೩೦ ಗಂಟೆಯಿಂದ ಹರಾಜು ನಡೆಸಲಾಗುವುದು ಹಾಗೂ ಒಂದು ಪಕ್ಷದಲ್ಲಿ ಸದರಿ ಬ್ಲಾಕಿನ ಮರಗಳು ಹರಾಜಿನಲ್ಲಿ ವಿಲೆ ಆಗದೇ ಇದ್ದಲ್ಲಿ, ದಿನಾಂಕ ೩೦.೦೯.೨೦೦೪ ರಂದು ಮರು ಟೆಂಡರ್ ಕಂ ಹರಾಜನ್ನು ಏರ್ಪಡಿಸಲಾಗಿರುತ್ತದೆ. | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಎಡಭಾಗ) ೪೮ ರಿಂದ ೪೯ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೪, ೯ ಮತ್ತು ೧೫ | ಆಲ ಮತ್ತು ಅರಳಿ ಮರ ಒಟ್ಟು ೩ ಮರಗಳು | ೩.೧೭೪ | ೨೫೦೦ |
| ೨ | -”- | -”- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಎಡಭಾಗ) ೪೯ ರಿಂದ ೫೦ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೧೭, ೨೨ ರಿಂದ ೨೬ ಮತ್ತು ೨೮ | ಆಲ, ಮತ್ತು ಇತರೆ ಜಂಗಲ್ ಮರ ಒಟ್ಟು ೭ ಮರಗಳು | ೦.೩೦೦ | ೯೨೦೦ |
| ೩ | -”- | -”- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಎಡಭಾಗ) ೫೦ ರಿಂದ ೫೦.೫ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೩೪, ೩೬, ೩೯, ೪೦, ೪೧, ೪೯, ೫೨, ೫೩, ೫೬, ೫೮ ಮತ್ತು ೫೯ | ಆಲ, ಮತ್ತು ಇತರೆ ಜಂಗಲ್ ಮರ ಒಟ್ಟು ೧೧ ಮರಗಳು | ೪.೬೪೨ | ೧೦೦೦೦ |
| ೪ | -”- | -”- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಎಡಭಾಗ) ೫೦.೫ ರಿಂದ ೫೧ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೩೭, ೩೮, ೬೦ ರಿಂದ ೬೪ ಮತ್ತು ೬೬ | ಆಲ, ಮತ್ತು ಇತರೆ ಜಂಗಲ್ ಮರ ಒಟ್ಟು ೮ ಮರಗಳು | ೫.೯೨೫ | ೨೪೦೦೦ |
| ೫ | -”- | -”- | ರಾಮನಗರ –ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಎಡಭಾಗ) ೫೧ ರಿಂದ ೫೧.೫ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೭೧, ೭೨, ೭೪ ರಿಂದ ೭೭ ಮತ್ತು ೭೯ | ಆಲ ಮತ್ತು ಪೆಲ್ಟೋಫಾರಂ ಮರ ಒಟ್ಟು ೭ ಮರಗಳು | ೬.೦೭೯ | ೧೬೬೭೦೦ |
| ೬ | -”- | -”- | ರಾಮನಗರ –ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಎಡಭಾಗ) ೫೧.೫ ರಿಂದ ೫೨ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೮೨, ೮೩, ೮೬, ೮೭ ಮತ್ತು ೮೯ | ಆಲ ಮತ್ತು ಪೆಲ್ಟೋಫಾರಂ ಮರ ಒಟ್ಟು ೫ ಮರಗಳು | ೯.೦೫೪ | ೧೧೫೦೦ |

| ೧ | ೨ | ೩ | ೪ | ೫ | ೬ | ೭ |
|---|---|---|---|---|---|---|
| ೭ | ವಲಯ ಅರಣ್ಯಾಧಿಕಾರಿಗಳ ಕಛೇರಿ, ರಾಮನಗರ ವಲಯ, ರಾಮನಗರ. | ೨೪-೦೯-೨೦೦೪ ರಂದು ಬೆಳಿಗ್ಗೆ ೧೧.೩೦ ಗಂಟೆಯಿಂದ ಹರಾಜು ನಡೆಸಲಾಗುವುದು ಹಾಗೂ ಒಂದು ಪಕ್ಷದಲ್ಲಿ ಸದರಿ ಬ್ಲಾಕಿನ ಮರಗಳು ಹರಾಜಿನಲ್ಲಿ ವಿಲೆ ಆಗದೇ ಇದ್ದಲ್ಲಿ, ದಿನಾಂಕ ೩೦.೦೯.೨೦೦೪ ರಂದು ಮರು ಟೆಂಡರ್ ಕಂ ಹರಾಜನ್ನು ಏರ್ಪಡಿಸಲಾಗಿರುತ್ತದೆ. | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಎಡಭಾಗ) ೫೨ ರಿಂದ ೫೩ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೯೦, ೯೪, ೯೭, ೯೯, ೧೦೨, ೧೧೧ ರಿಂದ ೧೧೪, ೧೧೬ ರಿಂದ ೧೧೯ ಮತ್ತು ೧೨೫, ೧೨೬ | ಆಲ, ಮಾವು, ಸಿಸ್ಸು, ನೇರಳೆ, ಬಸರಿ ಮತ್ತು ಕತ್ತಿ ಮರ ಒಟ್ಟು ೧೫ ಮರಗಳು | ೭.೮೬೯ | ೨೦೭೦೦ |
| ೮ | -"- | -"- | ರಾಮನಗರ –ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಎಡಭಾಗ) ೫೩ ರಿಂದ ೫೪ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೧೪೯ | ಸಿಸ್ಸು ಮರ ಒಟ್ಟು ೧ ಮರ | --- | ೫೦ |
| ೯ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಎಡಭಾಗ) ೫೪ ರಿಂದ ೫೪.೫ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೧೩೭, ೧೩೮, ೧೪೪, ೧೪೫, ೧೪೭, ೧೪೮, ೧೫೦, ೧೫೧, ೧೫೩, ೧೫೪, ೧೫೬, ೧೫೯, ೧೬೦, ೧೬೩ ಮತ್ತು ೧೬೪ | ಆಲ, ಬೇಲ ಸಿಸ್ಸು, ಮತ್ತು ಕತ್ತಿ ಮರ ಒಟ್ಟು ೧೫ ಮರಗಳು | ೦.೧೩೫ | ೨೪೨೫೦ |
| ೧೦ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಎಡಭಾಗ) ೫೪.೫ ರಿಂದ ೫೫ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೧೬೮, ೧೭೪, ೧೭೬, ೧೭೭, ೧೮೧, ೧೮೩ ಮತ್ತು ೧೮೪ | ಆಲ, ನೇರಳೆ, ಹುಣಸೆ, ಹತ್ತಿ ಮತ್ತು ಕತ್ತಿ ಮರ ಒಟ್ಟು ೭ ಮರಗಳು | ೦.೮೬೪ | ೧೮೫೦೦ |
| ೧೧ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಎಡಭಾಗ) ೫೫ ರಿಂದ ೫೬ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೧೮೬ ರಿಂದ ೧೮೯ | ಆಲದ ಮರ ಒಟ್ಟು ೪ ಮರಗಳು | ೫.೩೦೩ | ೯೦೦೦ |
| ೧೨ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಎಡಭಾಗ) ೫೬ ರಿಂದ ೫೭ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೧೯೦, ೨೦೩, ೨೦೫, ೨೦೬, ೨೦೯ ಮತ್ತು ೨೧೦ | ಆಲ, ಮತ್ತಿ, ಹಿಪ್ಪೆ ಮತ್ತು ಇತರ ಮರಗಳು ಒಟ್ಟು ೬ ಮರಗಳು | ೧೦.೪೮೫ | ೩೨೫೫೦ |
| ೧೩ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಎಡಭಾಗ) ೫೭ ರಿಂದ ೫೮ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೨೧೨, ೨೧೫, ೨೨೦ ಮತ್ತು ೨೨೩ | ಜಂಬು ನೇರಳೆ, ಆಲ, ತೊರೆ ಮತ್ತಿ ಮತ್ತು ಮಾವು ಮರಗಳು ಒಟ್ಟು ೪ ಮರಗಳು | ೩.೬೨ | ೯೫೦೦ |
| ೧೪ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಎಡಭಾಗ) ೫೮ ರಿಂದ ೫೮.೫ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೨೩೧ ರಿಂದ ೨೩೫, ೨೩೭, ೨೩೮ ಮತ್ತು ೨೪೦ | ತೊರೆ ಮತ್ತಿ ಮಾವು ಮರಗಳು ಒಟ್ಟು ೮ ಮರಗಳು | ೧೩.೮ | ೧೬೦೦೦ |

| ೧ | ೨ | ೩ | ೪ | ೫ | ೬ | ೭ |
|---|---|---|---|---|---|---|
| ೧೫ | ವಲಯ ಅರಣ್ಯಾಧಿಕಾರಿಗಳ ಕಛೇರಿ, ರಾಮನಗರ ವಲಯ, ರಾಮನಗರ. | ೨೪-೦೯-೨೦೦೪ ರಂದು ಬೆಳಿಗ್ಗೆ ೧೧.೩೦ ಗಂಟೆಯಿಂದ ಹರಾಜು ನಡೆಸಲಾಗುವುದು ಹಾಗೂ ಒಂದು ಪಕ್ಷದಲ್ಲಿ ಸದರಿ ಬ್ಲಾಕಿನ ಮರಗಳು ಹರಾಜಿನಲ್ಲಿ ವಿಲೆ ಆಗದೇ ಇದ್ದಲ್ಲಿ, ದಿನಾಂಕ ೩೦.೦೯.೨೦೦೪ ರಂದು ಮರು ಟೆಂಡರ್ ಕಂ ಹರಾಜನ್ನು ಏರ್ಪಡಿಸಲಾಗಿರುತ್ತದೆ. | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಎಡಭಾಗ) ೫೮.೫ ರಿಂದ ೫೯ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೨೪೨, ೨೪೫, ೨೪೬, ೨೪೯, ೨೫೦, ೨೫೪ ಮತ್ತು ೨೫೬ | ಆಲ, ಗೋಣಿ ಮತ್ತು ಇತರೆ ಮರಗಳು ಒಟ್ಟು ೭ ಮರಗಳು | --- | ೯೫೦೦ |
| ೧೬ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಎಡಭಾಗ) ೫೯ ರಿಂದ ೬೦ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೨೫೯, ೨೬೦, ೨೬೨, ೨೬೩ ಮತ್ತು ೨೬೪ | ಸಿಸ್ಸು, ತೊರೆ ಮತ್ತಿ, ಆಲ, ಮಾವು ಮತ್ತು ಇತರೆ ಮರಗಳು ಒಟ್ಟು ೫ ಮರಗಳು | ೩.೬೫ | ೮೦೫೦ |
| ೧೭ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಬಲ ಭಾಗ) ೪೮ ರಿಂದ ೪೯ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೧, ೬, ೭, ೮, ೧೦ ರಿಂದ ೧೪ ಮತ್ತು ೧೬ | ಹತ್ತಿ, ಅರಳಿ, ಆಲ, ಬಾಗಿ, ಬನ್ನಿ ಮತ್ತು ಇತರೆ ಮರಗಳು ಒಟ್ಟು ೧೦ ಮರಗಳು | ೭.೪೧೬ | ೧೪೦೦೦ |
| ೧೮ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಬಲ ಭಾಗ) ೪೯ ರಿಂದ ೫೦ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೧೮, ೧೯, ೨೧, ೨೨, ೨೯, ೩೧ ಮತ್ತು ೩೨ | ಅರಳೆ, ಆಲ, ನೇರಳೆ ಮತ್ತು ಇತರೆ ಮರಗಳು ಒಟ್ಟು ೭ ಮರಗಳು | ೨.೭೫೩ | ೧೫೦೦೦ |
| ೧೯ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಬಲ ಭಾಗ) ೫೦ ರಿಂದ ೫೧ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೩೩, ೪೨, ೫೧, ೫೫, ೫೭, ೬೫, ೬೭ ಮತ್ತು ೬೮ | ಆಲ, ಮತ್ತು ಇತರೆ ಮರಗಳು ಒಟ್ಟು ೮ ಮರಗಳು | ೫.೨೫ | ೨೩೦೦೦ |
| ೨೦ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಬಲ ಭಾಗ) ೫೧ ರಿಂದ ೫೨ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೭೩, ೭೮, ೮೦, ೮೧, ೮೪ ಮತ್ತು ೮೫ | ಆಲ, ಅರಳಿ, ತೊರೆಮತ್ತಿ ಮತ್ತು ಇತರೆ ಮರಗಳು ಒಟ್ಟು ೬ ಮರಗಳು | ೮.೨೯೨ | ೧೪೦೦೦ |
| ೨೧ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಬಲ ಭಾಗ) ೫೨ ರಿಂದ ೫೨.೫ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೮೮, ೯೧, ೯೨, ೯೩, ೯೫, ೯೬ ಮತ್ತು ೯೮ | ಆಲ, ಮಾವು, ತೊರೆಮತ್ತಿ ಮತ್ತು ಇತರೆ ಮರಗಳು ಒಟ್ಟು ೭ ಮರಗಳು | ೨.೨೬೨ | ೧೮೫೦೦ |
| ೨೨ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಬಲ ಭಾಗ) ೫೨.೫ ರಿಂದ ೫೩ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೧೦೦, ೧೦೧, ೧೦೩, ೧೦೫, ೧೦೬, ೧೦೭, ೧೦೯, ೧೧೦, ೧೧೫, ೧೨೦, ೧೨೧ ಮತ್ತು ೧೨೨ | ಆಲ, ಸಿಸ್ಸು, ನೇರಳೆ ಮತ್ತು ಇತರೆ ಮರಗಳು ಒಟ್ಟು ೧೨ ಮರಗಳು | ೪.೩೫೧ | ೧೭೧೭೦ |

| ೧ | ೨ | ೩ | ೪ | ೫ | ೬ | ೭ |
|---|---|---|---|---|---|---|
| ೨೩ | ವಲಯ ಅರಣ್ಯಾಧಿಕಾರಿಗಳ ಕಛೇರಿ, ರಾಮನಗರ ವಲಯ, ರಾಮನಗರ. | ೨೪-೦೯-೨೦೦೪ ರಂದು ಬೆಳಿಗ್ಗೆ ೧೧.೩೦ ಗಂಟೆಯಿಂದ ಹರಾಜು ನಡೆಸಲಾಗುವುದು ಹಾಗೂ ಒಂದು ಪಕ್ಷದಲ್ಲಿ ಸದರಿ ಬ್ಲಾಕಿನ ಮರಗಳು ಹರಾಜಿನಲ್ಲಿ ವಿಲೆ ಆಗದೇ ಇದ್ದಲ್ಲಿ, ದಿನಾಂಕ ೩೦.೦೯.೨೦೦೪ ರಂದು ಮರು ಟೆಂಡರ್ ಕಂ ಹರಾಜನ್ನು ಏರ್ಪಡಿಸಲಾಗಿರುತ್ತದೆ. | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಬಲ ಭಾಗ) ೫೩ ರಿಂದ ೫೪ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೧೨೩, ೧೨೪, ೧೨೭ ರಿಂದ ೧೩೧, ೧೩೩ ರಿಂದ ೧೩೫, ೧೪೬, ೧೪೭ | ಆಲ, ಸಿಸ್ಸು, ನೇರಳೆ, ಹತ್ತಿ ಮತ್ತು ಇತರೆ ಮರಗಳು ಒಟ್ಟು ೧೨ ಮರಗಳು | ೨.೪೮೫ | ೧೪೭೦೦ |
| ೨೪ | | | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಬಲ ಭಾಗ) ೫೪ ರಿಂದ ೫೪.೫ ಕಿ.ಮೀ. ಅಂತರದಲ್ಲಿ ಬರುವ ಮಂಗಳ ಸಂಖ್ಯೆ ೧೫೨, ೧೫೫, ೧೫೮, ೧೫೯, ೧೬೧, ೧೬೨, ೧೬೫, ೧೬೯ ಮತ್ತು ೧೭೦ | ಆಲ, ಬೇಲ, ಹುಣಸೆ, ನೇರಳೆ ಮತ್ತು ಇತರೆ ಮರಗಳು ಒಟ್ಟು ೯ ಮರಗಳು | ೫.೪೪೭ | ೧೮೫೦೦ |
| ೨೫ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಬಲ ಭಾಗ) ೫೪.೫ ರಿಂದ ೫೫ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೧೭೧, ೧೭೨, ೧೭೩, ೧೭೫, ೧೭೮ ರಿಂದ ೧೮೦ ಮತ್ತು ೧೮೨ | ಆಲದ ಮರಗಳು ಒಟ್ಟು ೮ ಮರಗಳು | --- | ೩೩೦೦೦ |
| ೨೬ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಬಲ ಭಾಗ) ೫೫ ರಿಂದ ೫೬ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೧೮೫, ೧೯೧ ರಿಂದ ೧೯೬ ಮತ್ತು ೨೦೦, ೨೦೧ | ಆಲ, ಸಿಸ್ಸು ಹುಣಸೆ, ಹೊಂಗೆ, ಬಸವನಪಾದ ಮರಗಳು ಒಟ್ಟು ೯ ಮರಗಳು | ೬.೧೨೩ | ೯೯೦೦ |
| ೨೭ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಬಲ ಭಾಗ) ೫೬ ರಿಂದ ೫೭ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೨೦೭ ರಿಂದ ೨೦೮ | ಆಲ, ಹುಣಸೆ, ಮರಗಳು ಒಟ್ಟು ೨ ಮರಗಳು | --- | ೭೦೦೦ |
| ೨೮ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಬಲ ಭಾಗ) ೫೭ ರಿಂದ ೫೮ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೨೧೧, ೨೧೩, ೨೧೪, ೨೧೬ ರಿಂದ ೨೧೯, ಮತ್ತು ೨೨೧, ೨೨೨ | ಆಲ, ಮಾವು, ತೊರೆಮತ್ತಿ ಮತ್ತು ಇತರೆ ಮರಗಳು ಒಟ್ಟು ೯ ಮರಗಳು. | ೦.೮೧೦ | ೧೯೦೦೦ |
| ೨೯ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಬಲ ಭಾಗ) ೫೮ ರಿಂದ ೫೮.೫ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೨೨೪ ರಿಂದ ೨೩೦, ೨೩೬, ೨೩೯ ಮತ್ತು ೨೪೧ | ಆಲ, ಮಾವು, ಅರಳಿ, ತೊರೆಮತ್ತಿ ಮತ್ತು ಇತರೆ ಮರಗಳು ಒಟ್ಟು ೧೦ ಮರಗಳು. | ೧೨.೦೪ | ೩೦೫೦೦ |
| ೩೦ | -"- | -"- | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಬಲ ಭಾಗ) ೫೮.೫ ರಿಂದ ೫೯ ಕಿ.ಮೀ. ಅಂತರದಲ್ಲಿ ಬರುವ ಮರಗಳ ಸಂಖ್ಯೆ ೨೪೩, ೨೪೪, ೨೪೭, ೨೪೮, ೨೫೧, ೨೫೨, ೨೫೩, ೨೫೫, ೨೫೭ ಮತ್ತು ೨೫೮ | ಆಲ, ಮಾವು ಮತ್ತು ಇತರೆ ಮರಗಳು ಒಟ್ಟು ೧೦ ಮರಗಳು. | ೩.೫೯ | ೩೭೫೦೦ |

| ೧ | ೨ | ೩ | ೪ | ೫ | ೬ | ೭ |
|---|---|---|---|---|---|---|
| ೩೧ | ವಲಯ ಅರಣ್ಯಾಧಿ ಕಾರಿಗಳ ಕಛೇರಿ, ರಾಮನಗರ ವಲಯ, ರಾಮನಗರ. | ೨೪-೦೯-೨೦೦೪ ರಂದು ಬೆಳಿಗ್ಗೆ ೧೧.೩೦ ಗಂಟೆಯಿಂದ ಹರಾಜು ನಡೆಸಲಾಗುವುದು ಹಾಗೂ ಒಂದು ಪಕ್ಷದಲ್ಲಿ ಸದರಿ ಬ್ಲಾಕಿನ ಮರಗಳು ಹರಾಜಿನಲ್ಲಿ ವಿಲೆ ಆಗದೇ ಇದ್ದಲ್ಲಿ, ದಿನಾಂಕ ೩೦.೦೯.೨೦೦೪ ರಂದು ಮರು ಟೆಂಡರ್ ಕಂ ಹರಾಜನ್ನು ಏರ್ಪಡಿಸಲಾಗಿರುತ್ತದೆ. | ರಾಮನಗರ – ಕನಕಪುರ ರಾಜ್ಯ ಹೆದ್ದಾರಿಯ ರಾಮನಗರ ವಲಯ (ಬಲ ಭಾಗ) ೫೯ ರಿಂದ ೬೦ ಕಿ.ಮೀ. ಅಂತರದಲ್ಲಿ ಬರುವ ಮರದ ಸಂಖ್ಯೆ ೨೬೧ | ಒಂದು ಆಲದ ಮರ | --- | ೨೫೦೦ |

ಷರತ್ತುಗಳು:-

1. ಈ ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬರು ಹರಾಜಿನಲ್ಲಿ ಭಾಗವಹಿಸಲು ರೂ. ೫,೦೦೦.೦೦ (ಐದು ಸಾವಿರ) ಗಳನ್ನು ನಗದು ರೂಪದಲ್ಲಿ ಅಥವಾ ಡಿ.ಡಿ.ಯ ರೂಪದಲ್ಲಿ ಮುಂಗಡ ಠೇವಣಿಯನ್ನು ಹರಾಜಿಗೆ ಮುನ್ನ ಕೊಡತಕ್ಕದ್ದು.
2. ಬ್ಲಾಕ್‌ಲಿಸ್ಟ್ ಆಗಿರುವವರು, ಇನ್‌ಸಾಲ್ವೆಂಟ್ಸ್, ಡಿಫಾಲ್ಟರ್ಸ್ ಮತ್ತು ಮೈನರ್, ಹರಾಜಿನಲ್ಲಿ ಭಾಗವಹಿಸುವುದಕ್ಕೆ ಅರ್ಹರಾಗಿರುವುದಿಲ್ಲ.
3. ಈ ಹರಾಜನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಪೂರ್ಣ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಪಡೆದಿರುತ್ತಾರೆ.
4. ಒಪ್ಪಿಕೊಳ್ಳಲಾದ ಹರಾಜಿನ ¼ ಭಾಗ ಹಣವನ್ನು ಪೂರ್ಣವಾಗಿ ಚಾಲ್ತಿಯಲ್ಲಿರುವ ಎಲ್ಲಾ ತೆರಿಗೆಗಳೊಂದಿಗೆ ಸ್ಥಳದಲ್ಲಿ ಹರಾಜಿನ ದಿನದಂದೇ ಪಾವತಿ ಮಾಡಬೇಕು. ಇನ್ನು ಮಿಕ್ಕ ¼ ಭಾಗ ಹಣವನ್ನು ಮರಗಳ ಕಟಾವಣೆ ಹಾಗೂ ಸಾಗಾಣಿಕೆಗೆ ಮಂಜೂರಾತಿ ನೀಡುವ ದಿನ ಅಥವಾ ಮುಂಚಿತವಾಗಿ ಪಾವತಿಸಬೇಕು. ಇಲ್ಲದಿದ್ದಲ್ಲಿ ಅವರ ಇ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುತ್ತದೆಯಲ್ಲದೆ ಸದರಿ ಬ್ಲಾಕಿನ ಮರಗಳನ್ನು ಅವರ ಜವಾಬ್ದಾರಿಯಲ್ಲಿ ಮರು ಹರಾಜು ಮಾಡಲಾಗುವುದು.
5. ಮೇಲ್ಕಂಡ ಹರಾಜಿನಲ್ಲಿ ಭಾಗವಹಿಸುವ ಮುನ್ನ ವಲಯ ಅರಣ್ಯಾಧಿಕಾರಿ, ರಾಮನಗರ ವಲಯ ರವರನ್ನು ಸಂಪರ್ಕಿಸಿ ರಾಮನಗರ-ಕನಕಪುರ ರಸ್ತೆಯ ಮರಗಳನ್ನು ಪರಿಶೀಲಿಸಬಹುದು.
6. ಸದರಿ ಹರಾಜಿನಲ್ಲಿ ಪಡೆದುಕೊಂಡ ಮರಗಳನ್ನು ಕಟಾವು ಮಾಡಲು ಹಾಗೂ ಸಾಗಾಣಿಕೆ ಮಾಡುವ ವೆಚ್ಚವನ್ನು ಸ್ವಂತ ನಿರ್ವಹಿಸತಕ್ಕದ್ದು ಹಾಗೂ ಇದರ ಸಂಬಂಧ ಯಾವುದೇ ಅಡೆತಡೆಗಳಿಗೆ ಅರಣ್ಯ ಇಲಾಖೆ ಜವಾಬ್ದಾರರಾಗಿರುವುದಿಲ್ಲ ಹಾಗೂ ಈ ಕಛೇರಿಯಿಂದ ಮರ ಕಟಾವು ಮಾಡಲು ಮಂಜೂರಾತಿ ನೀಡಿದ ದಿನಾಂಕದಿಂದ ೧೫ ದಿನದೊಳಗೆ ಸದರಿ ಮರಗಳನ್ನು ಕಟಾವು ಮಾಡಿ ಸಾಗಾಣಿಕೆ ಮಾಡತಕ್ಕದ್ದು.
7. ಸದರಿ ಹರಾಜಿನಲ್ಲಿ ಪಡೆದುಕೊಂಡ ಮರಗಳನ್ನು ಕಟಾವು ಮಾಡುವಾಗ ಸಾರಿಗೆ ಸಂಚಾರಕ್ಕೆ, ಯಾವುದೇ ಸಾರ್ವಜನಿಕ ಆಸ್ತಿ ಪಾಸ್ತಿಗಳಿಗೆ ಧಕ್ಕೆ ಆಗದಂತೆ ಕಡಿದು ಸಾಗಾಣಿಕೆ ಮಾಡತಕ್ಕದ್ದು. ಒಂದು ವೇಳೆ ಸಾರ್ವಜನಿಕ ಆಸ್ತಿಗೆ ತೊಂದರೆಯಾದಲ್ಲಿ ಗುತ್ತಿಗೆದಾರರೇ ಜವಾಬ್ದಾರರಾಗಿರುತ್ತಾರೆ.
8. ಅತಿ ಹೆಚ್ಚು ಬಿಡ್‌ದಾರರು ಹರಾಜಿನ ದಿನದಂದೆ ತಾವು ಸೂಚಿಸಿದ ಹರಾಜಿನ ಮೊತ್ತದ ಶೇಕಡ ೨೫% ರಷ್ಟು ಹಣವನ್ನು ಹಾಗೂ ಸೂಚಿಸಿದ ಮೊತ್ತಕ್ಕೆ ಅನ್ವಯಿಸುವ ಪೂರ್ಣ ತೆರಿಗೆಗಳನ್ನು ಜಮಾ ಮಾಡತಕ್ಕದ್ದು. ತಪ್ಪಿದಲ್ಲಿ ಇ.ಎಂ.ಡಿ ಮೊತ್ತವನ್ನು ಮುಟ್ಟುಗೋಲು ಹಾಕಿಕೊಂಡು ೨ ನೇ ಬಿಡ್‌ದಾರರು ಯಶಸ್ವಿ ಬಿಡ್ಡುದಾರರೆಂದು ಪರಿಗಣಿಸಲಾಗುವುದು.
9. ಯಶಸ್ವಿ ಬಿಡ್‌ದಾರರಿಗೆ ಆಗುವ ಲಾಭ ಅಥವಾ ನಷ್ಟಗಳಿಗೆ ಇಲಾಖೆ ಜವಾಬ್ದಾರಿಯಲ್ಲ.
10. ಬಹಿರಂಗ ಹರಾಜಿನಲ್ಲಿ ಉದ್ಭವಿಸಬಹುದಾದ ತಂಟೆ ತಕರಾರುಗಳಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.
11. ಹರಾಜಿನ ನಂತರ ಬರುವ ಬೆಲೆಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸಲಾಗುವುದಿಲ್ಲ.
12. ಯಾವುದೇ ತಂಟೆ ತಕರಾರುಗಳಿದ್ದಲ್ಲಿ ಹರಾಜು ಪ್ರಾರಂಭಿಸುವ ಎರಡು ಗಂಟೆ ಮುಂಚಿತವಾಗಿ ಸಂಬಂಧಿಸಿದ ಅಧಿಕಾರಿಗಳ ಗಮನಕ್ಕೆ ಲಿಖಿತ ಮೂಲಕ ತರತಕ್ಕದ್ದು ಹಾಗೂ ಹರಾಜಿನ ನಂತರ ತಡವಾಗಿ ಬರುವ ಯಾವುದೇ ತರಹದ ದೂರುಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.
13. ಯಶಸ್ವಿ ಬಿಡ್‌ದಾರರು ತಮ್ಮ ಬಿಡ್ಡಿನ ಬೆಲೆಯ ಮೇಲೆ ಮಾರಾಟ ತೆರಿಗೆ ೧೪%, ಮಾರಾಟ ತೆರಿಗೆಯ ಮೇಲೆ ಸರ್ಚಾರ್ಜ್ ೧೫%, ಅರಣ್ಯ ಅಭಿವೃದ್ಧಿ ತೆರಿಗೆ ೮%, ಆದಾಯ ತೆರಿಗೆ ೫%, ಮತ್ತು ಆದಾಯ ತೆರಿಗೆ ಮೇಲೆ ಸೆಸ್ ೫%.
14. ಯಶಸ್ವಿ ಬಿಡ್‌ದಾರರು ನಿಗದಿತ ಅವಧಿಯಲ್ಲಿ ಮರಗಳನ್ನು ಕತ್ರಾವಣೆ ಮಾಡಿ ಸಾಗಿಸದಿದ್ದ ಪಕ್ಷದಲ್ಲಿ ಹಾಗೂ ಮೇಲ್ಕಂಡ ೧೪ರ ಷರತ್ತಿನನ್ವಯ ಹಣ ಪಾವತಿಸದಿದ್ದಲ್ಲಿ ಇ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ಬಿಡ್‌ದಾರರ ಜವಾಬ್ದಾರಿ ಮೇರೆಗೆ ಮರು ಹರಾಜು ಮಾಡಲಾಗುವುದು. ಮರು ಹರಾಜಿನಲ್ಲಿ ಕಡಿಮೆ ಬಿಡ್ ಬಂದು ಸರ್ಕಾರಕ್ಕೆ ನಷ್ಟವಾದಲ್ಲಿ ಸೆಕ್ಷನ್ ೧೦೯ ರ ಕರ್ನಾಟಕ ಅರಣ್ಯ ಕಾಯ್ದೆಯಂತೆ ಬಾಕಿ ಭೂಕಂದಾಯ ರೂಪದಲ್ಲಿ ವಸೂಲಿ ಮಾಡಲಾಗುವುದು ಅಥವಾ ಸೆಕ್ಷನ್ ೫೪(೫೪) ಸರಕು ಸಾಮಗ್ರಿಗಳ ಮಾರಾಟದ ಕಾನೂನಿನ್ವಯ ಅಥವಾ ಸಿವಿಲ್ ಪ್ರೊಸೀಜರ್ ಕೋಡ್ ಅನ್ವಯ ಕ್ರಮ ಕೈಗೊಳ್ಳಲಾಗುವುದು.
15. ಈ ಹರಾಜಿಗೆ ಸಂಬಂಧಿಸಿದಂತೆ ವಿವರವಾದ ಷರತ್ತುಗಳನ್ನು ಹಾಗೂ ಇತರೆ ಮಾಹಿತಿಗಳನ್ನು ಈ ಕಛೇರಿಯ ಕೆಲಸದ ವೇಳೆಯಲ್ಲಿ ತಿಳಿದುಕೊಳ್ಳಬಹುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು.

ಪಿ.ಆರ್. 410

## ತೋಟಗಾರಿಕೆ ಇಲಾಖೆ
## ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, ರಾಜ್ಯವಲಯ, ಶಿವಮೊಗ್ಗ
## ಟೆಂಡರ್ - ಯಾ - ಬಹಿರಂಗ ಹರಾಜು ಪ್ರಕಟಣೆ
## ಸಂ: ಹಿಸತೋನಿ:ರಾವ:ಶಿ:ತಾಂಸ:975, 2004-05, ದಿನಾಂಕ: 16ನೇ ಆಗಸ್ಟ್ 2004

**ವಿಷಯ:** ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ), ಶಿವಮೊಗ್ಗ ರವರ ಅಧೀನದಲ್ಲಿ ಬರುವ ಜಿಲ್ಲೆಯ ವಿವಿಧ ರಾಜ್ಯವಲಯ ತೋಟಗಾರಿಕಾ ಕ್ಷೇತ್ರದ ಅಡಿಕೆ ಫಸಲನ್ನು ಟೆಂಡರ್ - ಯಾ - ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲು ಈ ಕೆಳಗಿನ ದಿನಾಂಕಗಳನ್ನು ನಿಗದಿಪಡಿಸಿರುವ ಬಗ್ಗೆ.

| ಕ್ರ. ಸಂ. | ತೋಟಗಾರಿಕೆ ಕ್ಷೇತ್ರ ನರ್ಸರಿಯ ಹೆಸರು | ಫಸಲಿನ ಹೆಸರು / ಅವಧಿ | ಟೆಂಡರ್ ಫಾರಂ ಪಡೆಯುವ ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ಯಾ- ಬಹಿರಂಗ ಹರಾಜನ್ನು ನಡೆಸುವ ದಿನಾಂಕ ಮತ್ತು ವೇಳೆ | ಟೆಂಡರ್- ಯಾ ಬಹಿರಂಗ ಹರಾಜು ನಡೆಯುವ ಸ್ಥಳ | ಇ.ಎಂ.ಡಿ. ಮೊತ್ತ ರೂ.ಪೈ. | ಷರಾ |
|---|---|---|---|---|---|---|---|---|
| 1 | ಸೀಬಿನಕೆರೆ ತೋಟಗಾರಿಕೆ ಕ್ಷೇತ್ರ, ತೀರ್ಥಹಳ್ಳಿ | ಅಡಿಕೆ 31.01.2005 ರವರೆಗೆ | 23.09.2004ರ ಸಂಜೆ 5.00 ಗಂಟೆಯೊಳಗೆ | 24.09.2004ರ ಬೆಳಿಗ್ಗೆ 11.00 ಗಂಟೆಯೊಳಗೆ | 24.09.2004ರ ಮಧ್ಯಾಹ್ನ 12.00 ಗಂಟೆಗೆ | ಕುರುವಳ್ಳಿ ತೋಟಗಾರಿಕೆ ಕ್ಷೇತ್ರ, ತೀರ್ಥಹಳ್ಳಿ | 30000-00 | |
| 2 | ಕುರುವಳ್ಳಿ ತೋಟಗಾರಿಕೆ ಕ್ಷೇತ್ರ, ತೀರ್ಥಹಳ್ಳಿ | ಅಡಿಕೆ 31.01.2005 ರವರೆಗೆ | 23.09.2004ರ ಸಂಜೆ 5.00 ಗಂಟೆಯೊಳಗೆ | 24.09.2004ರ ಬೆಳಿಗ್ಗೆ 11.30 ಗಂಟೆಯೊಳಗೆ | 24.09.2004ರ ಮಧ್ಯಾಹ್ನ 12.30 ಗಂಟೆಗೆ | ಕುರುವಳ್ಳಿ ತೋಟಗಾರಿಕೆ ಕ್ಷೇತ್ರ, ತೀರ್ಥಹಳ್ಳಿ | 30000-00 | |

### ಟೆಂಡರ್ - ಯಾ - ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಪಾಲಿಸಬೇಕಾದ ನಿಯಮ ಮತ್ತು ಷರತ್ತುಗಳು

1. ಟೆಂಡರ್ ಫಾರಂಗಳನ್ನು 25-00 (ರೂ. ಇಪ್ಪತ್ತೈದು) ಪಾವತಿಮಾಡಿ ಪಡೆಯತಕ್ಕದ್ದು.
2. ಟೆಂಡರ್ - ಯಾ - ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ನಿಗದಿಪಡಿಸಿದ ಠೇವಣಿ ಮೊತ್ತ ಮತ್ತು ಫಸಲಿಗೆ ನಮೂದಿಸಿರುವ ಟೆಂಡರ್ ಮೊತ್ತದ ಶೇ.50 ಭಾಗದ ಮೊತ್ತವನ್ನು ಅಡ್ಡಗೆರೆ (ಕ್ರಾಸ್ ಮಾಡಿದ) ಎಳೆದ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಆಯಾಯ ತೋಟಗಾರಿಕೆ ಕ್ಷೇತ್ರದ ಅಧಿಕಾರಿಗಳ ಪದನಾಮದಲ್ಲಿ ತೆಗೆಯಬೇಕು ಹಾಗೂ ಕಡ್ಡಾಯವಾಗಿ ಲಗತ್ತಿಸಬೇಕು.
3. ಟೆಂಡರ್ ಫಾರಂನಲ್ಲಿ ಪೂರ್ಣ ಹೆಸರು, ವಿಳಾಸ, ಟೆಂಡರ್ ಮೊತ್ತ (ಅಂಕೆಗಳಲ್ಲಿ ಅಕ್ಷರಗಳಲ್ಲಿ ಪ್ರತ್ಯೇಕವಾಗಿ) ಇತ್ಯಾದಿಗಳನ್ನು ದಾಖಲಿಸಿ ಸಹಿ ಮಾಡಿರಬೇಕು. ಇಲ್ಲದಿದ್ದರೆ, ಅಪೂರ್ಣ ಟೆಂಡರ್ ಎಂದು ಪರಿಗಣಿಸಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
4. ಭರ್ತಿ ಮಾಡಿದ ಮೊಹರಾದ ಟೆಂಡರ್ ಫಾರಂಗಳನ್ನು ಹರಾಜು ನಡೆಸುವ ದಿನಾಂಕ ಹಾಗೂ ಟೆಂಡರ್ - ಯಾ - ಬಹಿರಂಗ ಹರಾಜಿನ ಸಮಯದ ಒಂದು ಗಂಟೆಗೆ ಮುಂಚೆ ಕುರುವಳ್ಳಿ ತೋಟಗಾರಿಕೆ ಕ್ಷೇತ್ರದಲ್ಲಿ ಸಲ್ಲಿಸಬೇಕು ಅಥವಾ ಹಿಂದಿನ ದಿನಗಳಲ್ಲಿ ಆಯಾ ಕ್ಷೇತ್ರಗಳಲ್ಲಿ ಸಲ್ಲಿಸುವುದು.
5. ಬಹಿರಂಗ ಹರಾಜಿನಲ್ಲಿ ಬಿಡ್ಡು ಮಾಡುವವರು ಸಹ ನಿಗದಿಪಡಿಸಿದ ಠೇವಣಿ ಹಣವನ್ನು ಡಿ.ಡಿ. ರೂಪದಲ್ಲಿ ಸಲ್ಲಿಸಿ ಬಿಡ್ಡು ಮಾಡಲು ಅರ್ಹತೆ ಪಡೆಯಬೇಕು. ನಗದು ಹಣವನ್ನು ಸ್ವೀಕರಿಸಲಾಗುವುದಿಲ್ಲ.
6. ಟೆಂಡರ್ ಹಾಗೂ ಬಿಡ್ಡಿನ ಮೊತ್ತವನ್ನು (ಬಹಿರಂಗ ಹರಾಜು) ಅತಿ ಹೆಚ್ಚಿನ ಮೊತ್ತವಾದ ಒಂದನ್ನು ಮಾತ್ರ ಪರಿಗಣಿಸಲಾಗುವುದು. ಅತಿ ಹೆಚ್ಚಿನ ಬಿಡ್ಡುದಾರರು ಸಹ ಬಿಡ್ಡಿನ ಮೊತ್ತದ ಶೇ.50 ಭಾಗದ ಮೊತ್ತವನ್ನು ಸ್ಥಳದಲ್ಲಿ ಡಿ.ಡಿ. ರೂಪದಲ್ಲಿ ಪಾವತಿಸತಕ್ಕದ್ದು.
7. ಮೇಲಿನ ಕ್ಷೇತ್ರಗಳ ಫಸಲನ್ನು ಟೆಂಡರ್ - ಯಾ - ಬಹಿರಂಗ ಹರಾಜು ಅನುಮೋದನೆಯಾದ ದಿನಾಂಕದ ನಂತರ ಪೂರ್ಣ ಮೊತ್ತ ಪಾವತಿಸಿ ಫಸಲನ್ನು ರೂಢಿಸಿಕೊಳ್ಳಬಹುದು; (ಕಟಾವು ಮಾಡಿಕೊಳ್ಳುವುದು).
8. ಸದರಿ ಟೆಂಡರ್ - ಯಾ - ಬಹಿರಂಗ ಹರಾಜು ಪ್ರಕ್ರಿಯೆಯನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ತೋಟಗಾರಿಕೆ ನಿರ್ದೇಶಕರವರು ಪಡೆದಿರುತ್ತಾರೆ.
9. ಫಸಲನ್ನು ವೀಕ್ಷಿಸುವವರು ಆಯಾಯ ತೋಟಗಾರಿಕೆ ಕ್ಷೇತ್ರಗಳಿಗೆ ಭೇಟಿ ನೀಡಿ ಫಸಲನ್ನು ವೀಕ್ಷಿಸಬಹುದು.
10. ಯಶಸ್ವಿ ಟೆಂಡರ್‌ದಾರರು ಅಥವಾ ಹೆಚ್ಚಿನ ಬಿಡ್ಡುದಾರರು ಇಲಾಖೆಯಿಂದ ನಿಯಮಗಳನ್ನೊಳಗೊಂಡ ಕರಾರು ಪತ್ರವನ್ನು ಸಹಿ ಹಾಕಿ ಕರಾರು ಮಾಡಿಕೊಳ್ಳಬೇಕು.
11. ಫಸಲು ಯಾವುದೇ ಪ್ರಕೃತಿ ವಿಕೋಪಕ್ಕೆ ಹಾನಿಯಾದರೆ ಇಲಾಖೆಯು ಜವಾಬ್ದಾರಿಯಲ್ಲ, ಹಾಗೂ ಯಾವುದೇ ಪರಿಸ್ಥಿತಿಯಲ್ಲಿ ಹಣ ಹಿಂತಿರುಗಿಸಲಾಗುವುದಿಲ್ಲ.
12. ಫಸಲಿನ ಕಾವಲು ಕಟ್ಟಲೆಗಳನ್ನು ಟೆಂಡರ್ - ಯಾ - ಬಿಡ್ಡುದಾರರು ನೋಡಿಕೊಳ್ಳಬೇಕು.
13. ಫಸಲನ್ನು ಕಟಾವು ಮಾಡಿಕೊಳ್ಳುವ ಅವಧಿಗೆ ಕಟಾವು ಸೀಮಿತಗೊಳಿಸಬೇಕು.
14. ಹೆಚ್ಚಿನ ಮಾಹಿತಿಗಾಗಿ ಇಲಾಖೆ ಕಛೇರಿ ಕ್ಷೇತ್ರಗಳ ಅಧಿಕಾರಿಗಳನ್ನು ಭೇಟಿಯಾಗಬಹುದು.

ಪಿ.ಆರ್. 396

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ), ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.